# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 10ನೇ ಸಂಚಿಕೆ ಕೊಪ್ಪ 1-11-1987 ಭಾನುವಾರ ಬೆಲೆ 50 ಪೈಸೆ


ಇತಿಹಾಸ ಸೃಷ್ಟಿಸಿದ ನ. ರಾ. ಪುರದ ಸಹಕಾರ ಸಂಘ !

## ರದ್ದಾದ ಸರ್ವ ಸದಸ್ಯರ ಸಭೆ

(ವರದಿ: ಎಂ. ಐ. ಶ್ರೀನಿವಾಸ ಮೂರ್ತಿ)

ನರಸಿಂಹರಾಜಪುರ: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದ ಸರ್ವ ಸದಸ್ಯರ ಸಭೆಯನ್ನು ಅ. 19ರಂದು ಕರೆಯಲಾಗಿತ್ತು. ಸಭೆಯ ಆಹ್ವಾನ ಪತ್ರಿಕೆಯಲ್ಲಿ ಅನೇಕ ಲೋಪ ದೋಷಗಳಿದ್ದುದು ಮಾತ್ರವಲ್ಲದೆ, ಕಾರ್ಯಕ್ರಮದ ಸರಣಿಯಲ್ಲಿ ಮುಖ್ಯ ವಿಷಯಗಳಾದ ಆಡಿಟ್ ವರದಿ, ಬೈಲಾ ತಿದ್ದುಪಡಿ ಮತ್ತು ಸದಸ್ಯರಿಂದ ಬಂದ ಚರ್ಚೆ ಸತಕ್ಕ ವಿಷಯ—ಇವುಗಳನ್ನು ಕೈಬಿಡಲಾಗಿತ್ತು. ಸಂಘದ ಸದಸ್ಯರುಗಳಿಗೆ ಆಡಿಟ್ ವರದಿ, ಜಮಾ–ಖರ್ಚು ತಖ್ತೆ, ಆಯ–ವ್ಯಯ ಇತ್ಯಾದಿ ವಿವರಗಳು ತಾ॥ 19ರ ವರೆಗೂ ದೊರೆತಿರಲಿಲ್ಲ.

ಅನುಮಾನಕ್ಕೆ ಕಾರಣವಾದ ಈ ವಿಷಯಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿದ ಸದಸ್ಯರು ಸಭೆಯನ್ನು ಸರ್ವಾನುಮತದಿಂದ ರದ್ದುಗೊಳಿಸುವ ತೀರ್ಮಾನ ಕೈಗೊಂಡರು.

ಜಿಲ್ಲೆಯ ಇತಿಹಾಸದಲ್ಲಿಯೇ ಮೊದಲನೆಯದಾಗಿರಬಹುದಾದ ಈ ಕಾರ್ಯಕ್ರಮ ರದ್ದತಿ ಈ ಸಂಘದ ಕಾರ್ಯದರ್ಶಿಯ ಮತ್ತು ಸಂಬಂಧಪಟ್ಟ ಅಧಿಕಾರಿಗಳ ಬೇಜವಾಬ್ದಾರಿ ತನಕ್ಕೆ ಸಾಕ್ಷಿಯಾಗಿದೆ. ಸಾಲ ವಸೂಲಾತಿಯಲ್ಲಿ ರೈತರನ್ನು ಹಿಂಸಿಸುವ ಈ ಅಧಿಕಾರಿಗಳು, ಈ ರೀತಿ ಸಾವಿರಾರು ರೂಪಾಯಿಗಳ ನಷ್ಟಕ್ಕೆ ಯಾರು ಹೊಣೆ ಎಂದು ಶ್ರೀಸಾಮಾನ್ಯ ಕೇಳುವಂತಾಗಿದೆ.

ಜಿಲ್ಲಾದ್ಯಂತ 2 ದಿನ ವ್ಯಾಪಕ ಸಾಲ ಮೇಳ ಕಾರ್ಯಕ್ರಮದಲ್ಲಿ ಪೂಜಾರಿ ಆರೋಪ

# 'ರಾಜ್ಯದಲ್ಲಿ ಆರ್ಥಿಕ ದುರಾಡಳಿತದ ಪರಾಕಾಷ್ಠೆ'

**ಜಯಪುರ: ರಾಜ್ಯದ ಜನತಾ ಸರ್ಕಾರದ ಭ್ರಷ್ಟತೆ, ದುಂದು ವೆಚ್ಚ ಮತ್ತು ಹಣಕಾಸಿನ ಅಸಮರ್ಥ ನಿರ್ವಹಣೆಯಿಂದಾಗಿ ಕರ್ನಾಟಕ ಪ್ರಗತಿ ಕಾರ್ಯಗಳಲ್ಲಿ ಹಿನ್ನಡೆ ಅನುಭವಿಸಿದೆ ಎಂದು ಜನಾರ್ದನ ಪೂಜಾರಿ ಆರೋಪಿಸಿದರು.**

ಇಲ್ಲಿ ಅ. 28 ರಂದು ಸಾಲ ಮೇಳ ಕಾರ್ಯಕ್ರಮದಲ್ಲಿ ಭಾಗವಹಿಸುವ ಮೊದಲು ಪತ್ರಕರ್ತರೊಂದಿಗೆ ಮಾತಾಡುತ್ತಿದ್ದ ಅವರು, ಕೇಂದ್ರವು ಕಳೆದ ನಾಲ್ಕು ವರ್ಷಗಳಲ್ಲಿ ಹಿಂದೆಂದಿಗಿಂತಲೂ ಅಧಿಕ ಆರ್ಥಿಕ ನೆರವು ನೀಡಿದ್ದರೂ ರಾಜ್ಯ ಸರ್ಕಾರ ಬಡವರ ಕಲ್ಯಾಣ ಕಾರ್ಯಕ್ರಮಗಳಿಗೆ ಮತ್ತು ನೌಕರರ ಸಂಬಳಕ್ಕೇ ತಡಕಾಡುತ್ತಿದೆ ಎಂದು ಹೇಳಿ, ಹಣಕಾಸಿನ ದುರಾಡಳಿತ ಪರಾಕಾಷ್ಠೆ ಮುಟ್ಟಿದೆ ಎಂದರು.

4 ವರ್ಷಗಳಲ್ಲಿ 700 ಕೋಟಿ ರೂ. ಗಳನ್ನು ಬರಪರಿಹಾರಕ್ಕಾಗಿ ಖರ್ಚು ಮಾಡಿರುವುದಾಗಿ ಸಭೆಗಳಲ್ಲಿ ಹೇಳುವ ಮುಖ್ಯ ಮಂತ್ರಿಗಳು, ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ ವರದಿಯಲ್ಲಿ 193 ಕೋಟಿ ಖರ್ಚು ಮಾಡಿರುವುದಾಗಿ ತಿಳಿಸಿದ್ದಾರೆ ಇದರಲ್ಲಿ ಕೇಂದ್ರದ ನೆರವೇ 138 ಕೋಟಿಯಿದೆ ಎಂದು ಪೂಜಾರಿ ಹೇಳಿದರು.

**'ಜನರೇ ಕ್ರಮ ತಗೊಳ್ತಾರೆ'**

ಗಣರಾಜ್ಯ ವ್ಯವಸ್ಥೆ, ಕೇಂದ್ರ-ರಾಜ್ಯ ಸಂಬಂಧಗಳು ಮುಂತಾದ ಚೌಕಟ್ಟುಗಳ ಹಿನ್ನೆಲೆಯಲ್ಲಿ, ಈ ಆರ್ಥಿಕ ದುರಾಡಳಿತದ ವಿರುದ್ಧ ಕೇಂದ್ರ ಸರ್ಕಾರ ರಾಜ್ಯ ಸರ್ಕಾರದ ಮೇಲೆ ಕ್ರಮ ಕೈಗೊಳ್ಳುವುದು ಕಷ್ಟ ಆದರೆ ಸಮಯ ಬಂದಾಗ ಜನರೇ ಇವರಿಗೆ ಸೂಕ್ತ ಉತ್ತರ ನೀಡುತ್ತಾರೆ ಎಂದು ಪೂಜಾರಿ ಪ್ರಶ್ನೆಯೊಂದಕ್ಕೆ ಹೇಳಿದರು.

ಆದರೆ ರಾಜ್ಯದಲ್ಲಿ ಮಧ್ಯಂತರ ಚುನಾವಣೆಯ ಬೇಡಿಕೆಗೆ ತಮ್ಮ ಬೆಂಬಲವಿಲ್ಲ ಎಂದು ಅವರು ಸ್ಪಷ್ಟ ಪಡಿಸಿದರು. ನಾವು ಇನ್ನೂ 2 ವರ್ಷ ಜನರ ನಡುವೆ ತಾಳ್ಮೆಯಿಂದ ಕೆಲಸ ಮಾಡುತ್ತೇವೆ ನಮ್ಮ ಕೆಲಸ ಜನರಿಗೆ ಮೆಚ್ಚಿಗೆಯಾದರೆ ಅವರೇ ನಮ್ಮನ್ನು ಅಧಿಕಾರಕ್ಕೆ ತರುತ್ತಾರೆ ಎಂದರು.

ಅ. 27 ಮತ್ತು 28ರಂದು ಜಿಲ್ಲಾದ್ಯಂತ ವಿವಿಧ ಕಡೆಗಳಲ್ಲಿ ಸಾಲ ಮೇಳ ನಡೆಸಿದ ಪೂಜಾರಿ ಒಟ್ಟು 39270 ಜನರಿಗೆ 14 ಕೋಟಿ 87 ಲಕ್ಷ ರೂ. ವಿತರಿಸಿದರು.

**ಲಂಚ ನೀಡಬೇಡಿ**

ಸುಮಾರು 3 ಸಾವಿರಕ್ಕೂ ಹೆಚ್ಚು ಜನ ಸೇರಿದ್ದ ಸಭೆಯಲ್ಲಿ ಸಾಲಮೇಳವನ್ನು ಸಮರ್ಥಿಸಿ ಮಾತನಾಡಿದ ಅವರು, ಕಡಿಮೆ ಬಡ್ಡಿ ಮತ್ತು ಸಹಾಯ ಧನ ಸಹಿತವಾದ ಸಾಲ ನೀಡುವ ವಿವಿಧ ಯೋಜನೆಗಳನ್ನು ವಿವರಿಸಿ, ಯಾವುದೇ ಸಾಲ ನೀಡುವುದಕ್ಕಾಗಿ ಯಾವುದೇ ಅಧಿಕಾರಿಗೆ ಲಂಚ ನೀಡಬೇಡಿ ಎಂದು ಕಿವಿಮಾತು ಹೇಳಿದರು.

**ಮರು ಪಾವತಿ ಮಾಡಿ**

ಪಡೆದ ಸಾಲವನ್ನು ಸದುಪಯೋಗಪಡಿಸಿಕೊಂಡು ಕ್ರಮವಾಗಿ ಹಿಂದಿರುಗಿಸುವಂತೆ ಫಲಾನುಭವಿಗಳಿಗೆ ಕರೆ ನೀಡಿದ ಅವರು, ಎಲ್ಲ ಕಡೆ ಕ್ರಮವಾಗಿ ಸಾಲ ಹಿಂತಿರುಗಿಸಿದವರಲ್ಲಿ ಕೆಲವರನ್ನು ಗಂಧದ ಹಾರ ಮತ್ತು ಬಹುಮಾನಗಳೊಂದಿಗೆ ಸಾಂಕೇತಿಕವಾಗಿ ಸನ್ಮಾನಿಸಿದರು.

ಮುತ್ತಿನಕೊಪ್ಪ–1152 ಜನರಿಗೆ 42 ಲಕ್ಷ ರೂ., ಬಾಳೆಹೊನ್ನೂರು – 3930 ಜನರಿಗೆ 1.58 ಕೋಟಿ ರೂ., ಜಯಪುರ–1197 ಜನರಿಗೆ 49 ಲಕ್ಷ ರೂ., ಹರಿಹರಪುರ–2732 ಜನರಿಗೆ 1 ಕೋಟಿ ರೂ., ಕಿಗ್ಗದಲ್ಲಿ 1743 ಜನರಿಗೆ 6 ಲಕ್ಷ ರೂ — ಹೀಗೆ ಸಾಲ ವಿತರಿಸಿರುವುದಾಗಿ ಅಂಕಿ-ಅಂಶಗಳು ತಿಳಿಸಿವೆ.

ನ. ರಾ. ಪುರ ತಾಲ್ಲೂಕಿನ ಬೈರಾಪುರ, ಶೆಟ್ಟಿಕೊಪ್ಪ, ಸಾತ್ಕೋಳಿ ಗ್ರಾಮಗಳಲ್ಲಿ ಮಳೆಯಾಗದೆ ಬೆಳೆ ಹಾಳಾಗಿದ್ದು, ಅಲ್ಲಿನ ರೈತರಿಗೆ ಒಂದು ತಿಂಗಳೊಳಗೆ ಸಾಲ ಮಂಜೂರು ಮಾಡುವಂತೆ ಪೂಜಾರಿ ಅಧಿಕಾರಿಗಳಿಗೆ ಆದೇಶಿಸಿದರು.

ಸಾಲ ಕೋರಿ ಬಂದಿರುವ ಅಸಂಖ್ಯ ಅರ್ಜಿಗಳನ್ನು ಗೋಣಿ ಚೀಲದಲ್ಲಿ ತುಂಬಿಕೊಂಡ ಪೂಜಾರಿಯವರು, ಬರುವ ಜನವರಿಯೊಳಗಾಗಿ ಪುನಃ ಸಾಲ ಮೇಳ ನಡೆಸಿ ಸಾಲ ನೀಡುವ ಭರವಸೆ ಕೊಟ್ಟಿದ್ದಾರೆ.

ಪೂಜಾರಿಯವರ ಜೊತೆ ಸಂಸತ್ ಸದಸ್ಯೆ ತಾರಾದೇವಿ, ಜಿ. ಪ. ಕಾಂಗ್ರೆಸ್ ನಾಯಕ ಹಳಸೇ ಭೈರೇಗೌಡ ಮತ್ತಿತರ ಮುಖಂಡರೂ ಪ್ರವಾಸ ಮಾಡಿದರು. ಆದರೆ ಕೆಲವು ಮಂದಿ ಹಿರಿಯ ಬ್ಯಾಂಕ್ ಅಧಿಕಾರಿಗಳು ಪೂಜಾರಿಯವರ ಹಿಂದೆ ಮುಂದೆ ರಾಜಕೀಯ ನಕಲಿ ಶ್ಯಾಮರಂತೆ ಮೆರೆದಾಡುತ್ತಿದ್ದುದು, ದೊಡ್ಡ ರಾಜಕಾರಣಿಗಳಂತೆ ಗತ್ತಿನಿಂದ ಬೀಗುತ್ತಿದ್ದುದು ಅಸಹ್ಯಕರವಾಗಿ ಕಾಣುತ್ತಿತ್ತು.

**ಜಯಪುರದಲ್ಲಿ 'ಕರಾಜಿ' ಹರಿಜನರಿಂದ ಮನವಿ**

ಜಯಪುರಕ್ಕೆ ಪೂಜಾರಿಯವರು ಬರುತ್ತಿದ್ದಂತೆ 'ಕರಾಜಿ' ಹರಿಜನರು ಬ್ಯಾನರ್ ಮತ್ತು ಘೋಷಣಾ ಫಲಕಗಳೊಂದಿಗೆ ಅವರನ್ನು ಎದುರುಗೊಂಡು ಮನವಿ ಪತ್ರ ನೀಡಿದರು. ಅವರ ಸಮಸ್ಯೆಯನ್ನು ಶಾಂತವಾಗಿ ಕೇಳಿದ ಪೂಜಾರಿ, ಈ ಹೆಸರಿನ ಗೊಂದಲ ನಿವಾರಿಸಿ ಸೂಕ್ತ ಪರಿಹಾರ ದೊರಕಿಸುವುದು ರಾಜ್ಯ ಸರ್ಕಾರದ್ದೇ ಕೆಲಸ. ಆದರೆ ತಕ್ಷಣದಲ್ಲಿ ಅವರಿಗಾಗಿರುವ ಕೋರ್ಟು ಪ್ರಕರಣ ಮುಂತಾದವುಗಳ ವಿಚಾರದಲ್ಲಿ ತಮ್ಮಿಂದಾಗುವಷ್ಟು ಕ್ರಮ ಕೈಗೊಳ್ಳುವುದಾಗಿ ಭರವಸೆ ಕೊಟ್ಟರು.

## ಶೃಂಗೇರಿಯಲ್ಲಿ ಕತ್ತಲೆಯ ದೀಪಾವಳಿ !

## ವಿದ್ಯುತ್ ಅವ್ಯವಸ್ಥೆಗೆ ಪ್ರತಿಭಟನೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಕಳೆದ ಹಲವು ವಾರಗಳಿಂದ ವಿದ್ಯುತ್ ಕಡಿತ ಇಲ್ಲದ ವೇಳೆಯಲ್ಲಿ ಕೂಡ ಕಣ್ಣು ಮುಚ್ಚಾಲೆಯಾಡುತ್ತ ಟಿವಿಯಲ್ಲಿ ವಿಶ್ವಕಪ್ ಕ್ರಿಕೆಟ್ ವೀಕ್ಷಣೆಗೂ ಅಡ್ಡಿ ಮಾಡಿದ್ದಲ್ಲದೆ, ದೀಪಾವಳಿಯಲ್ಲೂ ನೀರು-ದೀಪಕ್ಕೆ ಬದಲು ಕತ್ತಲೆಯನ್ನೇ 'ಪೂರೈಸಿದ' ವಿದ್ಯುತ್ 'ವ್ಯವಸ್ಥೆ'ಯ ವಿರುದ್ಧ, ಮುಖ್ಯವಾಗಿ ಬಾಳೆಹೊನ್ನೂರು ಸ॥ ಕಾ॥ ಇಂಜಿನಿಯರ್ ದುಗ್ಗಪ್ಪ ಗೌಡರ ವಿರುದ್ಧ ಅ. 26ರಂದು ಶೃಂಗೇರಿಯಲ್ಲಿ 'ನಾಗರಿಕ ಕ್ರಿಯಾ ಸಮಿತಿ' ಆಶ್ರಯದಲ್ಲಿ ನೂರಾರು ಜನ ಪ್ರತಿಭಟನೆ ನಡೆಸಿದರು.

ಕೊಪ್ಪ ತಾಲ್ಲೂಕಿನಲ್ಲಿ ಕಡಿತದ ವೇಳೆ ಹೊರತುಪಡಿಸಿ ಸಮರ್ಪಕ ವ್ಯವಸ್ಥೆಯಿದ್ದು, ಶೃಂಗೇರಿ ತಾಲ್ಲೂಕಿನಾದ್ಯಂತ ಅಸಮರ್ಪಕವಾಗಿರುವ ಪೂರೈಕೆಯನ್ನು ಸರಿಪಡಿಸಲು ಒಂದು ವಾರ ಗಡುವು ನೀಡಿ, ತೃಪ್ತಿಕರ ವ್ಯವಸ್ಥೆಯಾಗದಿದ್ದರೆ ಹಿರಿಯ ಕ.ವಿ.ಮಂ. ಅಧಿಕಾರಿಗಳಿಗೆ ಘೇರಾವ್ ಮಾಡುವ ಎಚ್ಚರಿಕೆಯೊಂದಿಗೆ, ಶೃಂಗೇರಿಯ ಸೆಕ್ಷನ್ ಆಫೀಸರ್ ಮತ್ತು ತಹಸೀಲ್ದಾರರಿಗೆ ಜ್ಞಾಪನ ಪತ್ರ ಸಲ್ಲಿಸಲಾಯಿತು.

ಶೃಂಗೇರಿ ತಾ॥ಗೆ 2 ಲೈನ್‌ಗಳಲ್ಲಿ ವಿದ್ಯುತ್ ಪೂರೈಕೆಗೆ ವ್ಯವಸ್ಥೆ ಮಾಡುವಂತೆ ಒತ್ತಾಯಿಸಲಾಯಿತು.

## ಪದವೀಧರ ಮತದಾರರ ಪಟ್ಟಿ: ಅರ್ಜಿ ಸಲ್ಲಿಸಲು ಸೂಚನೆ

ಕೊಪ್ಪ: ಕರ್ನಾಟಕ ವಿಧಾನ ಪರಿಷತ್ತಿಗೆ 1988ರಲ್ಲಿ ನಡೆಯಲಿರುವ ದ್ವೈವಾರ್ಷಿಕ ಚುನಾವಣೆಗಳಿಗಾಗಿ ಪದವೀಧರ ಕ್ಷೇತ್ರಗಳ ಮತದಾರರ ಪಟ್ಟಿಗಳನ್ನು ತಯಾರಿಸಲಾಗುತ್ತಿದ್ದು, 1–11–87ಕ್ಕೆ ಮುಂಚೆ ಕನಿಷ್ಠ ಮೂರು ವರ್ಷಗಳ ಕಾಲ ಪದವಿ ಅಥವಾ ತತ್ಸಮ ವಿದ್ಯಾರ್ಹತೆ ಹೊಂದಿರುವವರು ತಮ್ಮ ಹೆಸರುಗಳನ್ನು ನೋಂದಾಯಿಸಲು ದಿನಾಂಕ 6–11–87ರ ಒಳಗಾಗಿ ನಿಗದಿತ ನಮೂನೆ 18ರಲ್ಲಿ 20 ಪೈಸೆ ಶುಲ್ಕದೊಂದಿಗೆ ಅರ್ಜಿಯನ್ನು, ಪದವಿ ಪಡೆದ ದಾಖಲೆಯೊಂದಿಗೆ ಕೊಪ್ಪ ತಾಲ್ಲೂಕು ತಹಸೀಲ್ದಾರ್ ಕಛೇರಿಗೆ ಸಲ್ಲಿಸಬೇಕೆಂದು ತಿಳಿಸಲಾಗಿದೆ.

**ಈ ಹಿಂದೆ ಹೆಸರು ನೋಂದಣಿ ಆಗಿರುವವರೂ ಸಹ ಪುನಃ ಹೊಸದಾಗಿ ನೋಂದಾಯಿಸಬೇಕಾಗಿದೆ**

## ಕಾಂಪೋಸ್ಟ್ ತಯಾರಿಕೆ ಶಿಬಿರ

ಹರಿಹರಪುರ : ಇಲ್ಲಿಗೆ ಸಮೀಪದ ಹೆಚ್ಚೆಯಲ್ಲಿ ಅ. 27ರಂದು ಕಂಪೋಸ್ಟ್ ಗೊಬ್ಬರ ತಯಾರಿಕೆಯ ತರಬೇತಿ ಶಿಬಿರ ಕೃಷಿ ಇಲಾಖೆ ಆಶ್ರಯದಲ್ಲಿ ನಡೆಯಿತು. ಹರಿಹರಪುರ ವೃತ್ತದ ಕೃಷಿ ಸಹಾಯಕರಾದ ಜಿ. ಜಿ. ಮಂಜುನಾಥ್ ಕಂಪೋಸ್ಟ್ ತಯಾರಿಕೆ ಹಾಗೂ ಹಿಂಗಾರು ಬೇಸಾಯ ಕಾರ್ಯಕ್ರಮದ ಬಗ್ಗೆ ಮಾಹಿತಿ ನೀಡಿದರು.

ಕನ್ನಡ ರಾಜ್ಯೋತ್ಸವಕ್ಕಾಗಿ ಜನತೆ ಪಡೆದ 'ಕೊಡುಗೆ' : ಹಲವು ವಿಚಾರಗಳ ಚಿಂತನ - ಮಂಥನ

# ದಕ್ಷತೆ, ಪ್ರಾಮಾಣಿಕತೆಗೆ 'ಬರ'—ದಿವಾಳಿಯೆದ್ದ ಸರ್ಕಾರ; ಪರ್ಯಾಯ ಶಕ್ತಿ-ಪಕ್ಷ; 'ಮಲೆನಾಡು ರಾಜ್ಯ'ದ ಬೇಡಿಕೆ

ನವೆಂಬರ್ 1 ಕನ್ನಡ ರಾಜ್ಯೋತ್ಸವದ ದಿನ. ಅಂದರೆ ಕನ್ನಡಿಗರ ಕರ್ನಾಟಕ ರಾಜ್ಯ ಸ್ಥಾಪನೆಯಾದ ಸಂತೋಷದ-ಉತ್ಸವ ದ ದಿನ.

ಸಂತೋಷವಾಗಲಿ, ಸಂತೋಷಪಡುವುದಕ್ಕೆ ಬೇಕಾದ ಪ್ರಸನ್ನತೆಯಾಗಲಿ ಇದೆಯೋ ಇಲ್ಲವೋ ಆದರೆ ಪ್ರತಿ ವರ್ಷ ನವೆಂಬರ್ 1ನೇ ತಾರೀಖಿನಂದು ಈ 'ಉತ್ಸವ'ವನ್ನು ಮಾತ್ರ ನಾವು ಆಚರಿಸುತ್ತಿದ್ದೇವೆ. ನಾವು ಎಂದರೆ ಜನ ಎನ್ನುವುದಕ್ಕಿಂತ, ಈಚೆಗೆ ಈ ಉತ್ಸವವನ್ನು ಸರ್ಕಾರ ಮಾತ್ರ ಆಚರಿಸುತ್ತಿರುವ ಹಾಗೆ ಕಾಣುತ್ತಿದೆ. ಹಾಗೆಯೇ ಈಗ ಮತ್ತೊಮ್ಮೆ ನವೆಂಬರ್ 1 ಬಂದಿದೆ.

ಇದೇ ಹೊತ್ತಿಗೆ, ಗುಲ್ಬರ್ಗದಲ್ಲಿ 58ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವೂ ನಡೆದಿದೆ ಒಟ್ಟನಲ್ಲಿ ಕನ್ನಡ ನಾಡು-ನುಡಿ-ಜನಜೀವನದ ಬಗ್ಗೆ, ಜನತೆಯ ಒಟ್ಟಾರೆ ಏಳಿಗೆಯ ಬಗ್ಗೆ ಪ್ರಬುದ್ಧವಾದ ಚಿಂತನೆ ನಡೆಸಲು ಒಳ್ಳೆಯ ಪಕ್ವವಾದ ಒಂದು ಸಂದರ್ಭ.

ಇತ್ತ ಹೆಚ್ಚೂ ಕಡಿಮೆ ಇದೇ ಹೊತ್ತಿಗೆ ಇನ್ನೊಂದೆರಡು ಸಂಗತಿಗಳೂ ರಾಜ್ಯದಲ್ಲಿ ವ್ಯಾಪಕವಾಗಿ ಚರ್ಚೆಯಾಗುತ್ತಿವೆ. ಒಂದು-ಕಳೆದ ನಾಲ್ಕು ವರ್ಷಗಳಿಂದ ರಾಜ್ಯವನ್ನು ಕಾಡಿದ ಬರಗಾಲವೊಂದು ಕಡೆಯಾದರೆ, ಇನ್ನೊಂದೆಡೆ ರಾಜ್ಯದಲ್ಲಿರುವ ಸಂಪನ್ಮೂಲಗಳನ್ನು ಸಮರ್ಥವಾಗಿ ಒಟ್ಟುಗೂಡಿಸಿ, ಅಚ್ಚುಕಟ್ಟಾಗಿ ರಾಜ್ಯದ ಹಣಕಾಸು ವ್ಯವಹಾರ ನಿರ್ವಹಿಸಲಾಗದೆ ಇವತ್ತು ರಾಜ್ಯದ ನೌಕರರ ಸಂಬಳಕ್ಕೇ ಪರದಾಡುವಷ್ಟು ದಿವಾಳಿಯಾಗಿರುವ ರಾಜ್ಯ ಸರ್ಕಾರ ಜನತೆಯನ್ನು ದಿಙ್ಮೂಢರನ್ನಾಗಿಸಿದೆ.

ಕೇಂದ್ರ ಸರ್ಕಾರದ ರೀತಿಯಲ್ಲೇ ದಿನ ದಿನಕ್ಕೂ ಅವ್ಯವಹಾರಗಳ ಆಗರವಾಗುತ್ತ ಭ್ರಷ್ಟತೆ, ಸ್ವಜನ ಪಕ್ಷಪಾತಗಳ ತೌರಾಗಿ, ಹಳ್ಳಿಗಾಡಿನಲ್ಲಿ ಪಾಳೆಯಗಾರಿ ಶಕ್ತಿಗಳ ದಬ್ಬಾಳಿಕೆ, ಪಟ್ಟಣಗಳಲ್ಲಿ ದಿನವಹಿ ದರೋಡೆಗಳು, ಪ್ರತಿಯೊಂದು ಅಗತ್ಯವಸ್ತುಗಳ-ಮುಖ್ಯವಾಗಿ ವಿದ್ಯುತ್ತಿನ ಅಭಾವ, ಮುಂತಾಗಿ ಕೊನೆಯಿಲ್ಲದಷ್ಟು ಸಮಸ್ಯೆಗಳ ಜೌಗಿನಲ್ಲಿ ಒದವರು, ಜನಸಾಮಾನ್ಯರು ಹೂತು ಹೋಗುತ್ತಿದ್ದರೆ ಏನೂ ಮಾಡಲಾಗದ ನಿಷ್ಕ್ರಿಯತೆಗೆ ತನ್ನನ್ನು ತಾನೇ ಗುರಿ ಪಡಿಸಿಕೊಂಡಿದೆ ಈ ವೈಫಲ್ಯ, ದೌರ್ಬಲ್ಯಗಳನ್ನು ಮುಚ್ಚಿಕೊಳ್ಳಲು ನಾನಾ ತಂತ್ರಗಾರಿಕೆ, ಪ್ರಚಾರಗಳ ಸರ್ಕಸ್ ಮಾಡುತ್ತಿದೆ.

(4ನೇ ಪುಟಕ್ಕೆ)




## ಒಂದು ಬಹುಮಾನಿತ ಕವನ

ಒಂದು ಮರವು ಗಾಳಿ ಬೀಸಿ
ಹಣ್ಣು ಬೀಳಿಸತೊಡಗಿತು.
ಆಗ ಮಕ್ಕಳೆಲ್ಲ ಬಂದು
ಮಾವಿನ ಹಣ್ಣನ್ನು ತಿಂದರು.
ಆಗ ಮಕ್ಕಳೆಲ್ಲ ಖುಷಿಪಟ್ಟು
ಇನ್ನೊಮ್ಮೆ ಹಣ್ಣು ಆದರೆ
ಬರುತ್ತೇವೆಂದು ಮರಕ್ಕೆ ಹೇಳಿ
ಹೊರಟು ಹೋದರು.
ಆಗ ಮರವು ಒಂದು ದಿವಸ
ಅವರಿಗೆ ಗಾಳಿ ಬೀಸಿ
ಕರೆಯಿತೆಲ್ಲ ಮಕ್ಕಳಿಗೆ
ಕರೆಯಿತೆಲ್ಲ ಮಕ್ಕಳಿಗೆ
ಆಗ ಅವರು ಓಡಿ ಬಂದು
ಮರವನ್ನು ಅಲುಗಾಡಿಸಿದರು.
ಆಗ ಹಣ್ಣುಗಳೆಲ್ಲ ಧುಪು ಧುಪು
ಎಂದು ಕೆಳಗೆ ಉರುಳಿದವು.
ಆಗ ಮಕ್ಕಳೆಲ್ಲ ಸಿಪ್ಪೆ ಸುಲಿದು
ಮಾವಿನ ಹಣ್ಣನ್ನು
ತಿನ್ನತೊಡಗಿದರು
ತಿನ್ನತೊಡಗಿದರು.
ಆಗ ಮಕ್ಕಳೆಲ್ಲ ಆ ಮರಕ್ಕೆ
ಥ್ಯಾಂಕ್ಸ್ ಎಂದು ಖುಷಿಪಟ್ಟು
ಹೊರಟು ಹೋದರು.

—ಮಲ್ಲಿಗೆ, (ಐದೂವರೆ ವರ್ಷ), ಸಂತ ಜೋಸೆಫ್ ನರ್ಸರಿ ಶಾಲೆ, ಕೊಪ್ಪ

(ಈ ಮೇಲಿನ ಕವನ 'ಸುದ್ದಿ ಸಂಗಾತಿ' ವಾರಪತ್ರಿಕೆಯ ದೀಪಾವಳಿ ವಿಶೇಷಾಂಕದಲ್ಲಿ 14 ವರ್ಷದೊಳಗಿನ ಮಕ್ಕಳ ಕವನ ಸ್ಪರ್ಧೆಯಲ್ಲಿ 200 ರೂ.ಗಳೊಂದಿಗೆ 2ನೇ ಬಹುಮಾನ ಪಡೆದಿದೆ. —ಸಂ.)

## ಲೋಭಿ ವನರಾಜ

ಒಂದು ದೊಡ್ಡ ಕಾಡಿಗೆ ಒಂದು ಸಿಂಹ ರಾಜನಾಗಿತ್ತು. ಒಮ್ಮೆ ಅದಕ್ಕೆ ತಾನು ಮುದಿಯಾಗುತ್ತಿರುವ ಅನುಭವವಾಯಿತು. ತಾನು ಸತ್ತರೆ ಅನ್ಯಾಯವಾಗಿ ರಾಜ ಪದವಿ ಬೇರೆಯವರ ಪಾಲಾಗುತ್ತಲ್ಲಾ! ಎಂದು ಅದಕ್ಕೆ ಚಿಂತೆಯಾಯಿತು.

ಅದು ಕಾಡಿನ ಎಲ್ಲಾ ಪ್ರಾಣಿ-ಪಕ್ಷಿಗಳನ್ನೂ ಆಸ್ಥಾನಕ್ಕೆ ಕರೆಸಿ ಹೀಗೆಂದಿತು— "ನನಗೆ ಒಂದು ಸಮಸ್ಯೆ ಎದುರಾಗಿದೆ. ಅದನ್ನು ನಿಮ್ಮಲ್ಲಿ ಯಾರಾದರೂ ಬಗೆಹರಿಸಬೇಕು. ಏನೆಂದರೆ ನನಗೆ ವಯಸ್ಸಾಗುತ್ತಿರುವ ಅನುಭವವಾಗಿದೆ. ಆದರೆ ನನಗೆ ವಯಸ್ಸಾಗಿಲ್ಲ, ನಾನಿನ್ನೂ ಯುವಕ ಎಂದು ನಿಮ್ಮಲ್ಲಿ ಯಾರು ಸಾಬೀತು ಮಾಡಬಲ್ಲಿರಿ?"

ಇದನ್ನು ಕೇಳಿ ಸಭೆಯಲ್ಲಿ ಮೌನ ನೆಲೆಸಿತು. ಮತ್ತೆ ಸಿಂಹರಾಜನೇ ಹೇಳಿತು— "ನಾಳೆಯವರೆಗೆ ಸಮಯ ಕೊಡುತ್ತೇನೆ. ಅಷ್ಟರೊಳಗೆ ಯಾರೂ ಈ ಸಮಸ್ಯೆ ಪರಿಹರಿಸದಿದ್ದರೆ ಎಲ್ಲರನ್ನೂ ಮರಣ ದಂಡನೆಗೆ ಗುರಿಪಡಿಸುತ್ತೇನೆ".

ಇದನ್ನು ಕೇಳಿ ಎಲ್ಲಾ ಪ್ರಾಣಿ-ಪಕ್ಷಿಗಳೂ ಥರ ಥರ ನಡುಗುತ್ತ ಮನೆಗೆ ಹೋದವು. ಯಾರಿಗೂ ಏನೂ ತೋಚಲಿಲ್ಲ. ರಾತ್ರಿ ಅವೆಲ್ಲ ತಮ್ಮೊಳಗೇ ಸಭೆ ನಡೆಸಿ ಉಪಾಯ ಯೋಚಿಸತೊಡಗಿದವು. ಆಗ, ಇಂಥ ಸಮಸ್ಯೆಗಳಿಂದ ಅವುಗಳನ್ನು ಯಾವಾಗಲೂ ಪಾರು ಮಾಡುವ ಮುದಿ ನರಿರಾಯ ಅವುಗಳಿಗೆ ಒಂದು ಉಪಾಯ ಹೇಳಿ ಕೊಟ್ಟಿತು.

ಮರುದಿನ ಅವೆಲ್ಲ ರಾಜನ ಬಳಿಗೆ ಹೋಗಿ, ಸಮಸ್ಯೆ ಬಿಡಿಸಲು ಇನ್ನೂ 2-3 ದಿನ ಅವಕಾಶ ಕೊಡಬೇಕೆಂದು ಕೇಳಿಕೊಂಡವು. ಸಿಂಹರಾಜ ಒಪ್ಪಿತು.

ಅನಂತರ ಪ್ರಾಣಿಗಳೆಲ್ಲ ನೆರೆಯ ಕಾಡುಗಳಿಗೆ ಹೋಗಿ ಹುಡುಕಿ, ತಮ್ಮ ರಾಜನಿಗಿಂತಲೂ ತೀರಾ ಮುದಿಯಾದ ಸಿಂಹವೊಂದನ್ನು ಪತ್ತೆ ಮಾಡಿದವು. ಅದನ್ನು ತಮ್ಮ ರಾಜ್ಯಕ್ಕೆ ಬರಬೇಕೆಂದು ಆಹ್ವಾನಿಸಿ, ತಮ್ಮೊಡನೆ ಕರೆದೊಯ್ದವು.

ನರಿರಾಯ ತಮ್ಮ ರಾಜನನ್ನು ಕುರಿತು, "ವಯಸ್ಸಾಗಿ, ಮುದಿಯಾದವರು ಈ ಸಿಂಹದ ಹಾಗಾಗುತ್ತಾರೆ. ನೀವೇನೂ ಹಾಗಾಗಿಲ್ಲವಲ್ಲ. ಆದ್ದರಿಂದ ನೀವಿನ್ನೂ ಯುವರಾಜರೆಂದೇ ತಿಳಿಯಬಹುದು" ಎಂದಿತು.

ಇದನ್ನು ಕೇಳಿದ ಲೋಭಿ ವನರಾಜ ಸಂತುಷ್ಟನಾಗಿ ನರಿರಾಯನಿಗೂ ಇನ್ನಿತರ ಪ್ರಾಣಿಗಳಿಗೂ ಅವರವರ ಘನತೆಗೆ ತಕ್ಕಂತೆ ಬಹುಮಾನ ಕೊಟ್ಟು ಕಳಿಸಿತು. ಮುದಿ ಸಿಂಹರಾಜನಿಗೂ ತಕ್ಕ ಆತಿಥ್ಯ ಮಾಡಿ ಬೀಳ್ಕೊಟ್ಟಿತು.

ಸಿ. ಎಸ್. ಪಲ್ಲವಿ, 5ನೇ ತರಗತಿ, ಉತ್ತಮೇಶ್ವರ.

### ಗಿಳಿಯ ಸೊಬಗು

ಗಿಳಿಯೆ ನೀನು ಸುಂದರಿ
ಎಷ್ಟು ಡೌಲ ವ್ಯೆಯಾರಿ
ಪೇಟೆಗೆ ಹೋಗಿ ಬಂದೆ
ಬೀಡ ಕದ್ದು ತಿಂದೆ
ಅದಕೆ ಬಾಯಿ ಕೆಂಪಾಯ್ತು
ಗಿಳಿಯ ಸೊಬಗು ಹೆಚ್ಚಾಯ್ತು.

—ಎ. ವಿ. ಸುಧಾ, 5ನೇ ತರಗತಿ ಆನೆಗುಂದ-ಶೃಂಗೇರಿ.

### ತಟ್ಟನೆ ಉತ್ತರಿಸಿ!

1. ಮಾತನಾಡಲು ಬರದ ಮೂಕ ನೀರು ಕೇಳಬೇಕಾದರೆ ಕೈ ಸನ್ನೆ ಮಾಡಿ ಕೇಳುತ್ತಾನೆ. ಕುರುಡ ಕತ್ತರಿ ಕೇಳಬೇಕಾದರೆ ಹೇಗೆ ಕೇಳುತ್ತಾನೆ?

2. ಪುಟ್ಟ ರಾಜು ತೆಂಗಿನ ಮರದ ಬುಡ ಹಿಡಿದು ತಲೆ ಅಲ್ಲಾಡಿಸುತ್ತಾನೆ. ನೀವು ಅಲ್ಲಾಡಿಸಬಲ್ಲಿರಾ?

(ಸಂಗ್ರಹ): —ಬಿ. ಎಸ್. ರಾಜು, 8ನೇ ತರಗತಿ ಬಾಳೆಹೊನ್ನೂರು.

### ಇವು ನಿಮಗೆ ಗೊತ್ತೆ?

1. ಸಿ. ವಿ. ರಾಮನ್‌ಗೆ ನೋಬೆಲ್ ಪಾರಿತೋಷಕ ದೊರೆತದ್ದು: 1930ರಲ್ಲಿ

2. ಭುವನೇಶ್ವರದಲ್ಲಿ ಯಾವ ದೇವಾಲಯ ಇದೆ?

ಸೂರ್ಯ ದೇವಾಲಯ

3. 4 ಸಾವಿರ ವರ್ಷಗಳ ಹಿಂದೆ ಪ್ರಖ್ಯಾತವಾದ ಆಟ ಯಾವುದು?

ಹಾಕಿ.

4. ಹಿಂದೂ ಮಹಾಸಾಗರದಲ್ಲಿಯ ದೊಡ್ಡ ದ್ವೀಪ ಯಾವುದು?

ಮಲಗಾಸೆ

5. ಫಿಜಿ ದ್ವೀಪಗಳೆಂದು ಹೇಳಲ್ಪಡುವ ದ್ವೀಪಗಳು ಎಷ್ಟಿವೆ?

300

(ಸಂಗ್ರಹ): ಬಿ. ಎಸ್ ರವೀಂದ್ರ 8ನೇ ತರಗತಿ ಬೇಡಗಾರು.

### ಒಗಟುಗಳು

1. ಅಂಕು ಡೊಂಕಿನ ಮರ ಸುಂಕಾಲಿ ಕಡಿದ ಮರ ಇಬ್ಬರಿಗೆ ಸುಖದ ಮರ ನಾಲ್ವರಿಗೆ ಕಷ್ಟದ ಮರ

2. ಧರೆಯ ತುದಿಯಲ್ಲಿ ಒಬ್ಬಳು ಮುತ್ತೈದೆ 'ಬೀಳುತ್ತೀನಿ-ಬೀಳುತ್ತೀನಿ' ಎಂದು ಹೇಳುತ್ತಿದ್ದಾಳೆ.

3. ಹತ್ತು ಅಂದರೆ ಹತ್ತುವುದಿಲ್ಲ-ಇಪ್ಪತ್ತು ಅಂದರೆ ಹತ್ತುವುದು.

4. ಅಪ್ಪನ ದುಡ್ಡು ಎಣಿಸುವುದಕ್ಕೆ ಆಗುವುದಿಲ್ಲ. ಅಮ್ಮನ ಹಾಸಿಗೆ ಸುತ್ತುವುದಕ್ಕೆ ಆಗುವುದಿಲ್ಲ.

5. ಹಸಿರು ಗಿಡದ ಮೇಲೆ ಮೊಸರು ಚೆಲ್ಲಿದೆ.

—ಎಸ್. ಎಸ್. ಉಷಾ ಕುಮಾರಿ 4ನೇ ತರಗತಿ, ಸಿರಿಮನೆ

### 27.9.87ರ 'ಚಿನಾರಿ ಕೂಟ'ದ ಜಾಣ ಪ್ರಶ್ನೆಗಳಿಗೆ ಸರಿಯುತ್ತರ

1. ಗೀತ ಹೇಳಿದಂಥ ಮಗು : ಅವಳೇ.
2. ಅಜ್ಜಿ, ಮಗಳು, ಮೊಮ್ಮಗಳು.
3. ಜೆ. ಎಲ್. ಬೇರ್ಡ್.
4. ಆಯಸ್ಸು.

# ಬಡವರ ಧ್ವನಿಯನ್ನು ಬ್ಯಾಂಕಿಗೆ ತಲುಪಿಸಿದ 'ಸಾಲ ಮೇಳ'

## — ಸಾಲ ಮೇಳ ಕಾರ್ಯಕ್ರಮದ ವಿರೋಧಿ ಟೀಕೆಗಳಿಗೆ ಕೆಲವು ಉತ್ತರಗಳು

ಹಣ, ಅಧಿಕಾರ, ಬುದ್ಧಿ, ಬಾಯಿ ಇಲ್ಲದವರ ಬಲವೂ ಒಂದೇ: ವರ್ಗದ ಸೊತ್ತಿನಂತಾಗಿರುವ ನಮ್ಮ ಸಮಾಜದಲ್ಲಿ ಆ ವರ್ಗದ ಆ
ಲೋಚನಾ ವಿಧಾನವೇ ಇಡೀ ಸಮಾಜದಲ್ಲಿ ಪ್ರತಿಧ್ವನಿಸುತ್ತದೆ. ಹೀಗಾಗಿ, ಯಾವುದೇ ಒಂದು ವಿಷಯದ ಬಗೆಗಿನ ಟೀಕೆಯು ಆಲೋಚನೆ
ಮತ್ತು ಸತ್ಯಾಸತ್ಯ ವಿಮರ್ಶೆಯನ್ನು ಹೆಚ್ಚಾಗಿ ಆಧರಿಸಿರದೆ, ಈ ಆಲೋಚನಾ ಸಾರ್ವಭೌಮರ ಹಿತಾಸಕ್ತಿಯನ್ನೇ ಆಧರಿಸಿರುತ್ತದೆ.
ಇವರ ಹಿತ ಯಾವಾಗಲೂ ಬಹುಸಂಖ್ಯೆಯ ಜನರ ಸಾರ್ವತ್ರಿಕ ಹಿತಕ್ಕೆ ವಿರುದ್ಧವಾಗಿರುವುದರಿಂದ, ಸಾರ್ವತ್ರಿಕ ಹಿತದ ಯಾವು
ದೇ ವಿಚಾರ ಇವರ ಟೀಕಾ ದಾಳಿಯಿಂದಾಗಿ ವಿಕೃತಗೊಂಡು ಇಡೀ ಸಮಾಜದಿಂದಲೇ ಪ್ರತಿರೋಧವನ್ನು ಎದುರಿಸಿದಂಥ ಎಷ್ಟೋ ಉದಾಹರ
ಣೆಗಳನ್ನು ನಾವು ಕಾಣುತ್ತೇವೆ.

ಇಂಥದೇ ಒಂದು ಸಂದರ್ಭ—ದೇಶಾದ್ಯಂತ ಬಡ ವರ್ಗಗಳಲ್ಲಿ ಜನಪ್ರಿಯವಾಗಿದ್ದು, ಉಳ್ಳವರ ವರ್ಗದಲ್ಲಿ ತೀವ್ರ ಟೀಕೆಗೆ ಗುರಿ
ಯಾಗಿರುವ 'ಸಾಲ ಮೇಳ' ಕಾರ್ಯಕ್ರಮ.

ಈ ಕಾರ್ಯಕ್ರಮದ ಸಾಧನೆಯ ವಸ್ತುನಿಷ್ಠ ವಿವೇಚನೆ, ಅದರ ವಿರುದ್ಧದ ಟೀಕೆಗಳಿಗೆ ಉತ್ತರ ಈ ಲೇಖನದಲ್ಲಿದೆ.

### ಕುಹಕ

ಉತ್ತಮ ಬಟ್ಟೆ ತೊಟ್ಟ, ಮೇಲ್ಜಾತಿಯ ಹಾಗೂ ಸುಮಾರಾಗಿ ಆರ್ಥಿಕವಾಗಿ ಮುಂದುವರಿದ, ಮೈ ಕೈ ಮಣ್ಣು ಮಾಡಿಕೊಳ್ಳದ ಜನ, ಮೈ ಕೊಳೆಯಾಗಿರುವ, ಅರೆಬರೆ ಕೊಳಕು ಬಟ್ಟೆ ತೊಟ್ಟಿರುವ, ಹೆಬ್ಬೆಟ್ಟು ಒತ್ತುವ ಜನರನ್ನು ಬ್ಯಾಂಕಿನ ಕಛೇರಿಯಲ್ಲಿ ನೋಡಿದಾಕ್ಷಣ ಸಿಡಿಮಿಡಿಗೊಳ್ಳುವುದು, ವ್ಯಂಗ್ಯವಾಡುವುದು ಒಂದು ಕಡೆಯಾದರೆ, ಹತ್ತಾರು ಹರಿಜನರು ಬ್ಯಾಂಕಿಗೆ ಸಾಲಕ್ಕಾಗಿ ಬಂದಾಕ್ಷಣ "ಓ, ಇವತ್ತು ಸಾರಾಯಿ ಅಂಗಡಿಗೆ ಹಬ್ಬ, ಇವತ್ತು ಇವರು ಮನೆಗೆ ಹೋಗಲ್ಲ, ರಸ್ತೆಮೇಲೆ" ಎನ್ನುವ ಕುಹಕದ, ತಾತ್ಸಾರದ ಮಾತನಾಡುವ ಜನ ಇನ್ನೊಂದು ಕಡೆಯಾದರೆ, ಹತ್ತು ಹಲವು ಯೋಜನೆಯಿಂದಲೇ ನಮಗೆ ಕೆಲಸ ಸಿಕ್ಕಿದೆ, ನಾವು ಒಂದು ಕಾಲದಲ್ಲಿ ಇವರಿಗಿಂತಲೂ ಕೆಳಮಟ್ಟದಲ್ಲಿದ್ದೆವು ಎನ್ನುವ ವಾಸ್ತವಾಂಶಕ್ಕೆ ಸ್ವಲ್ಪವೂ ಅಂಟಿಕೊಳ್ಳದೆ, ತಾವು ಬಂದ ದಾರಿಯನ್ನು ಒಮ್ಮೆಯೂ ಹಿಂದಿರುಗಿ ನೋಡದ, ಮೇಲ್ಮಾಣಿಸಿದ ಜನರ ಕುಹಕ, ವ್ಯಂಗ್ಯಕ್ಕೆ ಪೂರಕವಾಗಿರುವ ಬ್ಯಾಂಕ್ ನೌಕರ ವರ್ಗ ಕೌಂಟರಿನ ಹಿಂಬದಿಯಲ್ಲಿ.

ಇದು 1969ರ ಹಿಂದಣ ಚಿತ್ರವಲ್ಲ. 1987ರ ಅಕ್ಟೋಬರ್‌ನಲ್ಲಿಯೂ ಕಾಣುವ ಚಿತ್ರ. ಬಹುಶಃ ಮುಂದೆಯೂ ಕಾಣಬಹುದಾದ ಚಿತ್ರ.

ಯಾಕೆ ಹೀಗೆ !

### ಮಾರ್ಪಾಡಿಗಾಗಿ ಕಾನೂನುಗಳು

ಶ್ರೀಮಂತರು ಮತ್ತು ಮೇಲ್ಜಾತಿಯವರಿಗೆ ಸೀಮಿತವಾದ ಬ್ಯಾಂಕ್ ಸೌಲಭ್ಯಗಳು ಬಡವರಿಗೂ, ಹಿಂದುಳಿದ ವರ್ಗಕ್ಕೂ ತಲುಪಬೇಕು ಎಂದು ಬ್ಯಾಂಕ್‌ಗಳನ್ನು ರಾಷ್ಟ್ರೀಕರಿಸಿದ್ದಾಯ್ತು. ಆರ್ಥಿಕವಾಗಿ ಹಿಂದುಳಿದವರಿಗೆ ಶೇಕಡಾ 4ರಂತೆ ಕಡಿಮೆ ಬಡ್ಡಿಯ ಸಾಲ ಕೊಡುವ ಯೋಜನೆಯನ್ನು ಜಾರಿಗೊಳಿಸಿದ್ದಾಯ್ತು. ಕೃಷಿ ಕಾರ್ಮಿಕರು, ಕೂಲಿಗಾರರು ಮುಂತಾದ ದುರ್ಬಲ ವರ್ಗಕ್ಕೆ ಸಾಲ ಬೇಕಾದಾಗ ಜಾಮೀನಿಗಾಗಿ ಭೂಮಾಲೀಕರನ್ನೇ ಅವಲಂಬಿಸಬೇಕಾಗಿರುವುದರಿಂದ, ಇದು ಕಷ್ಟ ಎನ್ನುವ ವಿಚಾರ ತಿಳಿದು, ರೂ. 5000ದ ವರೆಗೆ ಜಾಮೀನು ರಹಿತ ಸಾಲ ಕೊಡಬೇಕೆಂದು ಕಾನೂನು ತಂದದ್ದೂ ಆಯ್ತು. ಸಾಲಕ್ಕೆ ಭದ್ರತೆಯೇ ಮುಖ್ಯವಲ್ಲ, ಉದ್ದೇಶವೇ ಮುಖ್ಯ ಎನ್ನುವ ಮೂಲಕ ಸಾಲ ಸಾರಾಸಗಟಾಗಿ ಚರ-ಸ್ಥಿರ ಆಸ್ತಿ ಇರುವವರಿಗೇ ಹರಿದು ಹೋಗದ ಹಾಗೆ ಶಾಸನವೂ ಬಂತು.

ಇಷ್ಟೆಲ್ಲ ಸುಧಾರಣೆಗಳು ಆಜ್ಞೆ ರೂಪದಲ್ಲಿದ್ದೂ, ಕಾರ್ಯರೂಪಕ್ಕೆ ಬರಬೇಕಾದರೆ ಪೂಜಾರಿಯವರ "ಸಾಲ ಮೇಳ"ವೇ ಬೇಕಾಯ್ತು ಎನ್ನುವುದು ಕೂಟ ಪ್ರಶ್ನೆ.

### 'ತುರ್ತುಸ್ಥಿತಿ'ಯೇ ಬೇಕಾಯ್ತು?

ಆರ್ಥಿಕವಾಗಿ ಹಿಂದುಳಿದವರಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ಸಿಗಬೇಕೆಂಬ ಉದ್ದೇಶದಲ್ಲಿ ಡಿ.ಆರ್.ಐ. ಸಾಲ ನೀಡುವ ಕ್ರಮವನ್ನು 1972ರಲ್ಲಿ ಜಾರಿಗೆ ತಂದಾಗ್ಯೂ 1974ರ ತನಕ ಒಂದು ಪೈಸೆಯೂ ಈ ಯೋಜನೆಯಡಿಯಲ್ಲಿ ಬಡವರಿಗೆ ಸಿಗಲಿಲ್ಲ. 1975ರ ನಂತರ ಬ್ಯಾಂಕಿನ ಆಡಳಿತ ವರ್ಗ ಸ್ವಲ್ಪ ಮನಸ್ಸು ಮಾಡಿದ ಹಾಗೆ ತೋರಿತು. ಬಹುಶಃ ಈ ಯೋಜನೆ ಕಾರ್ಯ ರೂಪಕ್ಕೆ ಬರಲು ತುರ್ತು ಪರಿಸ್ಥಿತಿಯ ಅವಶ್ಯಕತೆ ಇತ್ತಂತ ಕಾಣಿಸ್ತದೆ!

ರೂ. 5000ದ ತನಕ ಜಾಮೀನು ರಹಿತ ಸಾಲ ನೀಡಬೇಕೆಂಬ ಆರ್. ಬಿ. ಐ. ಆಜ್ಞೆಯಿದ್ದರೂ ಸಹ, ಆಜ್ಞೆಯನ್ನು ಪಾಲಿಸಬೇಕಾದರೆ ಪೂಜಾರಿಯವರು ಹತ್ತಾರು ಸಾಲ ಮೇಳಗಳನ್ನು ಉಪಯೋಗಿಸಿಕೊಂಡು ಬ್ಯಾಂಕಿನ ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಳ್ಳಬೇಕಾಯ್ತು? ಅಥವಾ ಮಲ ಹೊರುವ ಪದ್ಧತಿ ನಿಷೇಧ, ಬಿತ್ತಲೆ ಸೇವೆ ನಿಷೇಧ, ಮತ್ತು ಸತಿಪದ್ಧತಿ ನಿಷೇಧಕ್ಕಾಗಿ ಬಂದಂತಹ ಉಗ್ರ ಶಾಸನ ಬ್ಯಾಂಕಿಂಗ್ ವ್ಯವಸ್ಥೆಗೂ ಬೇಕೆ? ಮನವರಿಕೆ, ಶಿಕ್ಷಣ ಮುಂತಾದ ಮಾನಸಿಕ ಬದಲಾವಣೆಯಿಂದ ಸುಧಾರಣೆ ಸಾಧ್ಯವಿಲ್ಲವೆ?

ಸಾಮೂಹಿಕವಾಗಿ ಸಾಲ ನೀಡುವ ರೀತಿಯಿಂದಾಗಿ ತುರ್ತಾಗಿ ನಿರ್ಧಾರ ತೆಗೆದುಕೊಳ್ಳಲು ಅನುಕೂಲವಾಗುವುದು. ಬ್ಯಾಂಕಿನ ಬಾಗಿಲಿಗೆ ಪದೇ ಪದೇ ಹೋಗುವುದು ಕಮ್ಮಿಯಾಗುವುದು ಎನ್ನುವ ಅಭಿಪ್ರಾಯವೂ ಇದೆ. ಈ ಎಲ್ಲ ದೃಷ್ಟಿಯಿಂದಲೂ ಬ್ಯಾಂಕಿನ ಆಡಳಿತ ವರ್ಗದವರು ಪರೋಕ್ಷವಾಗಿ ಪೂಜಾರಿಯವರನ್ನು ಸಾಲ ಮೇಳದಂತಹ ಯೋಜನೆಗೆ ಪ್ರೇರೇಪಿಸಿದರು ಎಂದರೆ ತಪ್ಪಾಗಲಾರದು.

### ವಿಶ್ಲೇಷಣೆ

ಇನ್ನು ಸಾಲಮೇಳದ ಮೇಲಿರುವ ಆಪಾದನೆಗಳನ್ನು ವಿಶ್ಲೇಷಿಸುವ. ಸರ್ಕಾರ ಬಡವರಿಗಾಗಿ ಯಾವುದೇ ಯೋಜನೆಯನ್ನು ಅನುಷ್ಠಾನಗೊಳಿಸಿದರೂ ಪಟ್ಟಭದ್ರ ಹಿತಾಸಕ್ತಿಗಳು, ಜಾತೀವಾದಿ ಮತ್ತು ಬಂಡವಾಳಶಾಹಿ ಪತ್ರಿಕೆಗಳು ಆ ವ್ಯೂಹವನ್ನು ಹೊಕ್ಕು ಯೋಜನೆಯನ್ನು ವಿಕೃತಗೊಳಿಸಿ, ಕಲುಷಿತಗೊಳಿಸಿ, ಸರ್ಕಾರದ ಹೆಸರಿಗೆ ಮಸಿ ಬಳಿದು, ಬಡವರಲ್ಲಿರುವ ಸಣ್ಣ ಪುಟ್ಟ ದೋಷಗಳಿಗೆ ಭೂತಗನ್ನಡಿ ಹಿಡಿದು, ಸುಳ್ಳು ಅಂಕಿಸಂಖ್ಯೆಯನ್ನು ಕೊಟ್ಟು ಗುಡ್ಡ ಅಗೆದು ಇಲಿ ಹಿಡಿಯುವ ಪ್ರವೃತ್ತಿಯನ್ನು ಸಾಬೀತುಪಡಿಸಿಕೊಂಡಿರುವುದನ್ನು ನಾವು ನೋಡಿದ್ದೇವೆ. ಅದಕ್ಕೆ ಈ ಸಾಲ ಮೇಳ ಹೊರತಾಗಿಲ್ಲ.

### ಮರುಪಾವತಿಯ ಪ್ರಶ್ನೆ

'ಈ ಸಾಲಗಳು ಮರುಪಾವತಿಯಾಗುವುದಿಲ್ಲ' ಎನ್ನುವುದು ಇವರ ಸಾಮಾನ್ಯ ಕೂಗು, ರೂ. 5900 ಕೋಟಿ ಬಾಕಿ ಇದೆ ಎಂದು ತಮ್ಮ ವಾದವನ್ನು ಪುಷ್ಟೀಕರಿಸುತ್ತಾರೆ. ಆದರೆ **ಪ್ರಜ್ಞಾಪೂರ್ವಕವಾಗಿ, ಜಾಣ ಮರೆವಿನಿಂದಾಗಿ 1.25 ಲಕ್ಷ ಜನರು ರೋಗಗ್ರಸ್ತ ಉದ್ದಿಮೆಗಳ ಹೆಸರಿನಲ್ಲಿ 4700 ಕೋಟಿ ರೂ.ಗಳನ್ನು ನುಂಗಿ ಹಾಕಿದ್ದನ್ನು, ಇನ್ನೂ ಅದೇ ರೀತಿ ನುಂಗುತ್ತಿರುವುದನ್ನು ಹೇಳುವುದಿಲ್ಲ !**

### ಯಾರೀ ಜನ ?

ಸಾಲ ಮೇಳಗಳಲ್ಲಿ ಸಾಮಾನ್ಯವಾಗಿ ಕಾಣಿಸುವಂತಹ ಚೋಮನ ಸಂತತಿಯವರಲ್ಲಿ, ಬೋವಿ ಜನಾಂಗವಲ್ಲ, ಅಗಸರ ಮಕ್ಕಳಲ್ಲ, ಬಿಲ್ಲವ, ದೇವಾಡಿಗ, ಬ್ಯಾರಿಗಳಂತೂ ಅಲ್ಲ. ಬುದ್ಧಿಬಲ, ಜಾತಿಬಲ, ನಾಲಿಗೆ ಬಲವಿರುವ, ಮೇಲ್ಜಾತಿ ಹಾಗೂ ಶ್ರೀಮಂತ ವರ್ಗಕ್ಕೆ ಸೇರಿದವರು, ತಮ್ಮ ಲೋಪದೋಷ, ದೌರ್ಬಲ್ಯ, ವಿಫಲತೆಗಳ ಗಾಯಕ್ಕೆ ಹರಿತವಾದ ನಾಲಿಗೆ ಮತ್ತು ಲೇಖನಿಯಿಂದ ಜಾಣತನದ ಮುಖವಾಡವನ್ನು ಹೆಚ್ಚು ಬಲ್ಲವರು. ಅದೇ ಹಳ್ಳಿಯ ಓದು ಬರಹವಿಲ್ಲದ ಬಡವ ಕೆಲಸದಲ್ಲಿ ಪ್ರಾಮಾಣಿಕನಾಗಿದ್ದೂ, ವಿಫಲನಾದಾಗ ಬ್ಯಾಂಕ್ ಅಧಿಕಾರಿಗಳು ಕೇಳುವ ಜಾಣ ಪ್ರಶ್ನೆಗಳಿಗೆ ಉತ್ತರಿಸಬಲ್ಲ. ಇದು ವಾಸ್ತವಾಂಶ.

### ತಾಕತ್ತು

ಇನ್ನು, "ಈ ಪೂಜಾರಿ ಸಾಲ ಮೇಳದ ವೇದಿಕೆಯಲ್ಲಿ ಬ್ಯಾಂಕ್ ಅಧಿಕಾರಿ, ನೌಕರ ವರ್ಗದವರನ್ನು ಬಯ್ಯುವುದೆಂದರೇನು? ಇಷ್ಟೇ ಲೋಪದೋಷವಿರುವ ಬೇರೆ ಇಲಾಖೆಯ ನೌಕರರನ್ನು ಬಯ್ಯುವ ತಾಕತ್ತಿದೆಯೇ?" ಇತ್ಯಾದಿ ಅಪಸ್ವರಗಳು. ಪೂಜಾರಿ ಬ್ಯಾಂಕಿಂಗ್ ಉಸ್ತುವಾರಿ ನೋಡಿಕೊಳ್ಳುವ ಮಂತ್ರಿಯಾದ್ದರಿಂದ ಬ್ಯಾಂಕ್ ನೌಕರರ ಬೇಜವಾಬ್ದಾರಿತನ, ಅದಕ್ಷತೆ, ಬಡಜನ ವಿರೋಧಿ ಮನೋಭಾವಗಳನ್ನು ಹೀಗಳೆಯುವುದರಲ್ಲಿ ಅರ್ಥವಿದೆ. ಅವರಿಗೆ ಬೇರೊಂದು ಇಲಾಖೆ ಕೊಟ್ಟರೆ ಅಲ್ಲಿನ ನೌಕರರ ಲೋಪದೋಷಗಳನ್ನೂ ಸಹ ಇಷ್ಟೇ ಕಟುವಾಗಿ ಹೆಕ್ಕಿ ಹೇಳಿಯಾರು. ಬೇರೆ ಇಲಾಖೆಗಳ ಮಂತ್ರಿಗಳು ತೆಪ್ಪಗೆ ಕೂತರೆ ಅದು ಅವರ ದೌರ್ಬಲ್ಯ ಮತ್ತು ನಿಷ್ಕ್ರಿಯತೆಯ ಸಂಕೇತ, ಅಷ್ಟೇ. ಈ ಬ್ಯಾಂಕ್ ನೌಕರರೇನು ದೇವಲೋಕದಿಂದ ಇಳಿದು ಬಂದವರಲ್ಲ ಅಥವಾ ಸತ್ಯ ಹರಿಶ್ಚಂದ್ರನ ಸೋದರರು ಅಲ್ಲ.

### ಉತ್ಪಾದನೆ, ಹಣದುಬ್ಬರ

ಇನ್ನು ಉತ್ಪಾದನೆ, ಹಣದುಬ್ಬರಕ್ಕೆ ಸಂಬಂಧಪಟ್ಟ ವಿಚಾರ. 'ಸಾಲ ಮೇಳ' ಹಣ ಅನುತ್ಪಾದಕ ರಂಗಕ್ಕೆ ಹೋಗುವುದರಿಂದ, ಉದ್ದೇಶಿತ ಕಾರ್ಯಕ್ಕೆ ವಿನಿಯೋಗವಾಗದಿರುವುದರಿಂದ ಹಣದುಬ್ಬರಕ್ಕೆ ಕಾರಣವಾಗುತ್ತಿದೆ ಎಂತ ಒಂದು ಆಪಾದನೆ. ಬೇರೆ ದೊಡ್ಡ ಸಾಲಗಳು ಶೇಕಡಾ 1[illegible] ರಷ್ಟು ಉದ್ದೇಶಿತ ಕಾರ್ಯಕ್ಕೇ ವಿನಿಯೋಗಿಸಲ್ಪಡುತ್ತವೆ, ತನ್ಮೂಲಕ ಉತ್ಪಾದನೆ ಹೆಚ್ಚಾಗುತ್ತದೆ ಎಂದು ಇವರು [illegible] ಇವರಿಗೆಲ್ಲೋ ಭ್ರಮೆ. ಎಷ್ಟೋ [illegible] ಸಾಲಗಾರರ ಉದ್ದೇಶವೇ ಬೇರೆ, [illegible] ಯೇ ಬೇರೆ !

(4ನೇ ಪುಟ[illegible]

## ಬ್ಯಾಂಕ್ ಹಣ ಪೋಲು ವಿರುದ್ಧ ದಿಲ್ಲಿಯಲ್ಲಿ ಬೃಹತ್ ರ್ಯಾಲಿಗೆ ಸಿದ್ಧತೆ

**ಪ್ರತಿ ವರ್ಷ ರೋಗಗ್ರಸ್ತವಾಗುವ ಕೈಗಾರಿಕೆಗಳಿಂದ ಬ್ಯಾಂಕು[illegible] 570 ಕೋಟಿ ರೂ.ಗಳಷ್ಟು ಹಣ ನಷ್ಟವಾಗುತ್ತಿದೆ. ಶ್ರೀಮಂತರು ಕಂ[illegible]ಗಳ ಹೆಸರಿನಲ್ಲಿ ಸಾಲ ಮಾಡಿ, ನಂತರ 'ನಷ್ಟ'ದ ಹಾದಿ ತೋರಿಸುವು[illegible] ಬ್ಯಾಂಕ್ ವ್ಯವಸ್ಥೆಗೇ ಕೊಡಲಿ ಪೆಟ್ಟಾಗಿದೆ. ಇದನ್ನು ತಡೆಗಟ್ಟಲು ಒಂ[illegible] ಸಮಗ್ರ ವ್ಯವಸ್ಥೆ ಮಾಡಲು ಪ್ರಧಾನಮಂತ್ರಿಗಳನ್ನು ಒತ್ತಾಯಿಸುವುದಕ[illegible] ಮುಂದಿನ ಜನವರಿ – ಮಾರ್ಚಿ ನಡುವೆ ಅಖಿಲ ಭಾರತ ಬ್ಯಾಂಕ್ ನೌ[illegible] ಸಂಘದಿಂದ ದೆಹಲಿಯಲ್ಲಿ 50 ಸಾವಿರಕ್ಕೂ ಹೆಚ್ಚು ನೌಕರರ ಬೃಹತ್ ರ[illegible] ನಡೆಸಲಾಗುವುದೆಂದು ಸಂಘದ ಪ್ರಧಾನ ಕಾರ್ಯದರ್ಶಿ ಎಸ್. ಪಿ. ಸ[illegible]ರೇಶನ್ ತಿಳಿಸಿದ್ದಾರೆ.**

('ಆಂದೋಲನ' ನ[illegible]

# ಬಡವರ ಧ್ವನಿಯನ್ನು ಬ್ಯಾಂಕಿಗೆ ತಲುಪಿಸಿದ 'ಸಾಲ ಮೇಳ'

(3ನೇ ಪುಟದಿಂದ)

ಬಡವ ಸ್ವಲ್ಪ ಹಣವನ್ನು ಮನೆ ರಿಪೇರಿಗೆ, ಸಣ್ಣ ಬಣ್ಣಕ್ಕೆ, ಮಗಳ ಮದುವೆಗೆ ಖರ್ಚು ಮಾಡುವುದು ಅನಿವಾರ್ಯವಾಗುತ್ತದೆ. ಇದನ್ನೇ ದೊಡ್ಡ ಮಾಡಿ ತೋರಿಸುವವರು ದೊಡ್ಡ ಪ್ಲಾಂಟರುಗಳು, ಉದ್ಯಮಿಗಳು ತಾವು ತೆಗೆದುಕೊಂಡ ಸಾಲದ ...ಚ್ಚಿನ ಪಾಲನ್ನು ವಾಹನಗಳಿಗೆ, ಬಂಗಲೆಗಳಿಗೆ, ಮಗಳ ಅದ್ದೂರಿ ಮದುವೆಗೆ, ಊಟಿ-ಪಾನೀಯಕ್ಕೆ ಮತ್ತಿತರ ಐಷಾರಾಮಗಳಿಗೆ ಖರ್ಚು ಮಾಡುವಾಗ ತುಟಿ ಬಿಚ್ಚುವುದಿಲ್ಲ. ಈ ಐಷಾರಾಮಗಳು ಏನನ್ನು ಉತ್ಪಾದಿಸುತ್ತವೆ? ಹಣದುಬ್ಬರಕ್ಕೆ ಇವುಗಳ ಕೊಡುಗೆ ಎಷ್ಟು?

### ಹೊಸ ತಂತ್ರ

ಈ ಯಾವ ದೋಷಾರೋಪದಿಂದಲೂ ಸಾಲ ಮೇಳವನ್ನು ನಿರ್ಲಕ್ಷಿಸಲಾಗದಿದ್ದರಿಂದ ಈಗ ಹೊಸ ತಂತ್ರವನ್ನು ಈ ಜನ ಉಪಯೋಗಿಸುತ್ತಿದ್ದಾರೆ. "ಬ್ಯಾಂಕಿನಲ್ಲಿ ಡಿಪಾಜಿಟ್ ಇಟ್ಟರೆ ಸಾಲ ಮೇಳದಲ್ಲಿ ಬಡವರಿಗೆ ಹಂಚುತ್ತಾರೆ. ನಿಮಗೆ ಹಣವಿಲ್ಲ. ನಿಮಗೆ ಹಣ ಕೊಡಲು ಸಾಧ್ಯವಾಗದಿದ್ದಾಗ ಒಂದು ಸರ್ಟಿಫಿಕೇಟನ್ನು ಕೊಡುತ್ತಾರೆ. ಅದಕ್ಕೆ ಉಪ್ಪು ಹಾಕಿ ನೆಕ್ಕಿದರೆ ಸೈ" ಎನ್ನುವ ಅಪಪ್ರಚಾರ. ಈ ಜನರಿಗೆ ಹಿಂದೆ ಎರಡು ಬಾರಿ ರೂ. 100ರ ನೋಟಿನ ಅಪಮೌಲ್ಯದ ...ರಸು ಬಿದ್ದು ಮನೆಯಲ್ಲಿ, ಅಂಗಡಿಯಲ್ಲಿ, ಎಲ್ಲೆಲ್ಲಿಯೋ ಇದ್ದ ನೂರು ರೂಪಾಯಿ ನೋಟನ್ನೆಲ್ಲ ಬ್ಯಾಂಕಿಗೆ ತಂದು ಜಮಾ ಮಾಡಿ ನಗೆಪಾಟಲಿಗೀಡಾಗಿದ್ದರ ನೆನಪು ಇದ್ದಂತಿಲ್ಲ!

ಯಾವಾಗಲೂ ರಾಜಕೀಯ ಅಭದ್ರತೆಯನ್ನು, ಆರ್ಥಿಕ ಅಸ್ಥಿರತೆಯನ್ನು ಬಯಸುವ ಈ ಕ್ರೂರ ಸಂತೋಷಿಗರು ಒಂದು ಮಾತನ್ನು ನೆನಪಿಟ್ಟುಕೊಳ್ಳಲಿ — ಈ ಜುಜುಬಿ ಸಾಲ ಮೇಳದಿಂದ ದೇಶದ ಅರ್ಥ ವ್ಯವಸ್ಥೆ ಕೆಟ್ಟು ಹೋಗುವುದಿಲ್ಲ. ಇಡೀ ದೇಶದ ಆರ್ಥಿಕ ಪರಿಸ್ಥಿತಿಯ ಉಸ್ತುವಾರಿಯ ಹೊಣೆ ಹೊತ್ತ ರಿಸರ್ವ್ ಬ್ಯಾಂಕೇ 'ಎಲ್ಲಾ ಬ್ಯಾಂಕುಗಳೂ ತಾವು ನೀಡುವ ಒಟ್ಟು ಸಾಲದಲ್ಲಿ ಕಡೇ ಪಕ್ಷ ಶೇ. 1ರಷ್ಟಾದರೂ ಈ ಸಾಮಾಜಿಕ ಉದ್ದೇಶದ ಡಿಆರ್‌ಐ ಸಾಲಗಳನ್ನು ಕೊಡಬೇಕು' ಎಂದು ನಿಬಂಧನೆ ಹಾಕಿದೆಯೆಂದರೆ, ಈ ಬ್ಯಾಂಕುಗಳ ಸಾಲದ ವೈಖರಿ ಅರ್ಥವಾದೀತು. ಜೊತೆಗೆ ಸಾಲ ಮೇಳದ ಸಾಲಗಳ ಪ್ರಮಾಣ ಈ ಶೇ. 1ಕ್ಕಿಂತಲೂ ಕಮ್ಮಿ ಎಂದೂ ಅರ್ಥವಾಗುತ್ತಷ್ಟೆ?

(6ನೇ ಪುಟಕ್ಕೆ)

# ಬಡವರಿಗೆ ಸಾಲ ಮೇಳ : ಡಾ॥ ನಂಜುಂಡಪ್ಪ ಸಮರ್ಥನೆ

ಮಂಗಳೂರು, ಅ. 22- ಸಾಲ ಮೇಳಗಳನ್ನು ಬೆಂಗಳೂರು ವಿಶ್ವವಿದ್ಯಾನಿಲಯದ ಉಪ ಕುಲಪತಿ ಡಾ॥ ಡಿ. ಎಂ. ನಂಜುಂಡಪ್ಪ ಸಮರ್ಥಿಸಿದ್ದಾರೆ.

ಅವರು ಇತ್ತೀಚೆಗೆ ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಎ. ಬಿ. ಶೆಟ್ಟಿ ಸ್ಮಾರಕ ದತ್ತಿನಿಧಿ ಉಪನ್ಯಾಸ ನೀಡಿದ ನಂತರ ಉಪಸ್ಥಿತರಿದ್ದವರೊಬ್ಬರು ಸಾಲ ಮೇಳಗಳ ಬಗ್ಗೆ ಅಭಿಪ್ರಾಯ ಕೇಳಿದಾಗ ಉತ್ತರಿಸುತ್ತಿದ್ದರು.

1972ರಲ್ಲಿ ಡಿ ಆರ್ ಐ ಸಾಲ ನೀಡುವ ಕ್ರಮವನ್ನು ಜಾರಿಗೆ ತರಲಾಯಿತು. ಶೇ. 4 ಬಡ್ಡಿಯ ಈ ಸಾಲದ ಪ್ರಯೋಜನ ಆರ್ಥಿಕವಾಗಿ ಹಿಂದುಳಿದವರಿಗೆ ಸಿಗಬೇಕೆಂಬುದು ಉದ್ದೇಶವಾಗಿತ್ತು. ದುರಾದೃಷ್ಟಕ್ಕೆ 1972ರಿಂದ 74ರವರೆಗೆ ಒಂದು ಪೈಸೆ ಸಾಲವೂ ಈ ಯೋಜನೆಯ ಮೂಲಕ ಬಡವರಿಗೆ ಸಿಗಲಿಲ್ಲ. ಆದರೆ ಈಗ ಇದರ ಪ್ರಯೋಜನ ಸಿಗುತ್ತಿದೆ ಎಂದು ಡಾ॥ ನಂಜುಂಡಪ್ಪ ಹೇಳಿದರು.

ಬ್ಯಾಂಕ್‌ಗಳ ಸ್ಥಾಪನೆ ಕೇವಲ ಡಿಪಾಜಿಟ್ ಸಂಗ್ರಹಿಸಿ, ಶಾಖೆಗಳನ್ನು ವಿಸ್ತರಿಸುವುದಕ್ಕಲ್ಲ. ಆರ್ಥಿಕ ನೆರವು ನೀಡಿ ಆರ್ಥಿಕವಾಗಿ ದುರ್ಬಲರಾದವರನ್ನು ಸಬಲರನ್ನಾಗಿ ಮಾಡುವುದಕ್ಕೆ ಎಂದರು.

ಮೊದಲು ವೈಟ್ ಕಾಲರ್ ಮಣ್ಣುಗೂಡಿಕೊಳ್ಳದ ಜನರನ್ನು ಬಿಟ್ಟರೆ ಉಳಿದವರಿಗೆ ಬ್ಯಾಂಕ್ ಮ್ಯಾನೇಜರ್ ಅವರ ಚೇಂಬರಿಗೆ ಹೋಗಿ ಸಾಲ ಪಡೆಯುವ ಅವಕಾಶ ಇರಲಿಲ್ಲ ವ್ಯಾಪಕವಾದ ಸಾಲ ಮೇಳಗಳ ನಂತರ ಬಡವರಿಗೆ ನೇರವಾಗಿ ಬ್ಯಾಂಕ್‌ಗಳಿಗೆ ತೆರಳಿ ಸಾಲ ಪಡೆಯುವ ಶಕ್ತಿ ಬಂದಿದೆ ಎಂದರು.

ಸಾಮೂಹಿಕವಾಗಿ ಸಾಲ ನೀಡುವ ವಿಧಾನವನ್ನೂ ಸಮರ್ಥಿಸಿದ ಅವರು ತುರ್ತಾಗಿ ನಿರ್ಧಾರ ತೆಗೆದುಕೊಳ್ಳಲು ಇದರಿಂದ ಸಾಧ್ಯ. ಬ್ಯಾಂಕಿನ ಬಾಗಿಲಿಗೆ ಬಡವರು ಹೋದರೆ 'ನಾಳೆ ಬನ್ನಿ.... ಒಂದು ವಾರ ಬಿಟ್ಟು ಬನ್ನಿ' ಎಂದೂ ಹೇಳುವ ಸಾಧ್ಯತೆಗಳಿವೆ. ಇದನ್ನು ಹೋಗಲಾಡಿಸಬೇಕಾದರೆ ಸಾಲ ಮೇಳಗಳೇ ಸರಿ ಎಂದರು.

ಕಡಿಮೆ ಬಡ್ಡಿಯ ಸಾಲಗಳು ಮರುಪಾವತಿ ಆಗುವುದಿಲ್ಲ ಎಂಬುದನ್ನು ಅಲ್ಲಗಳೆದ ಡಾ॥ ನಂಜುಂಡಪ್ಪ ಈ ದೇಶದಲ್ಲಿ ಸುಮಾರು 3600 ಕೋಟಿ ರೂಪಾಯಿ ಹಣ ರೋಗಗ್ರಸ್ತ ಉದ್ದಿಮೆಗಳ ಹೆಸರಲ್ಲಿ ಕೊಳೆಯುತ್ತಿದೆ. ಇದು ಹಿಂದಕ್ಕೆ ಬಂದೀತೆ? ಎಂದೂ ಪ್ರಶ್ನಿಸಿದರು

('ಮುಂಗಾರು' ವರದಿ.)

(ಖ್ಯಾತ ಆರ್ಥಿಕ ಮತ್ತು ಯೋಜನಾ ತಜ್ಞರಾದ ಡಾ॥ ನಂಜುಂಡಪ್ಪ ನಮ್ಮ ಜನತಾ ಸರ್ಕಾರದ ಯೋಜನಾ ಇಲಾಖೆಯ ಉನ್ನತ ಅಧಿಕಾರಿಯಾಗಿದ್ದವರು.

—ಸಂ.)

# ಕನ್ನಡ ರಾಜ್ಯೋತ್ಸವ : ಹಲವು ವಿಚಾರಗಳ ಚಿಂತನ - ಮಂಥನ

(…ನೇ ಪುಟದಿಂದ)

...ಇಂಥದೇ ದುರಾಡಳಿತದಲ್ಲಿ ಈಗಿನ ಸರ್ಕಾರ 'ಅಣ್ಣ'ನಾದ ಕಾಂಗ್ರೆಸ್‌ಗೆ ಬದಲಾಗಿ ...ಸೃಷ್ಟಿಯಾದ ಈ ಜನತಾ ಸರ್ಕಾರವು ...ಣ್ಣನನ್ನೂ ಮೀರಿಸುವಂತೆ ಬೆಳೆಯುತ್ತಿದ್ದ ...ಇವೆರಡೂ ಅಲ್ಲದ ಮೂರನೇ ರಾಜಕೀಯ ಶಕ್ತಿ ಅಥವಾ ಪಕ್ಷವೊಂದರ ಸೃಷ್ಟಿಯ ...ಯತ್ನಗಳೊಂದು ಕಡೆ ತಡಕಾಟದಲ್ಲಿವೆ. ...ರಂತವೆಂದರೆ, ಆಲೋಚನೆಯಲ್ಲಿ ...ಸ್ಪರ ಹೆಚ್ಚೇನೂ ಭೇದವಿಲ್ಲದ ಎರಡು ಗುಂಪುಗಳು ಒಟ್ಟಾಗಿಯಲ್ಲ—ಪ್ರತ್ಯೇಕವಾಗಿ ಇಂಥ ಯತ್ನಕ್ಕಿಳಿದಿರುವುದು ... ಒಂದು-ಲಂಕೇಶ್ ಪತ್ರಿಕಾ ಬಳಗದ ...ತೃತ್ವದಲ್ಲಿ ಹೆಚ್ಚಿನ ಮಟ್ಟಿಗೆ ಚಿಂತನೆಯ ...ಟ್ಟದಲ್ಲಿ ಇಂಥ ಯತ್ನಕ್ಕೆ ತೊಡಗಿದ್ದರೆ, ...ನ್ನೊಂದು—ರಾಜ್ಯ ರೈತಸಂಘದ ಮುಖಂ... ಮುಂದಾಳತ್ವದಲ್ಲಿ, ಹೆಚ್ಚಿನ ಅನುಷ್ಠಾನ ಮಟ್ಟದಲ್ಲಿ ಪ್ರಯತ್ನಕ್ಕಿಳಿದಿರುವುದು. ...ದರೆ ಕೈಗಾರಿಕಾ ಕಾರ್ಮಿಕರು (ಮ... ವರ್ಗದ ಕಾರ್ಮಿಕರ ವಿಭಾಗಗಳೂ ...), ದಲಿತರು, ವಂಚಿತರಾದವರ ಗಣನೀಯವಾದ ವಿಭಾಗ ಈ ಪ್ರಯತ್ನಗಳಲ್ಲಿ ಸೇ... ಈಗ ಸೇರಿರುವ ಸಂಘಟನೆಗಳು ಇಡೀ ಸಮುದಾಯದ ಮೇಲೆ ಹೊಂದಿರುವ ...ವ ಖಂಡಿತಾ ಒಂದು ಪರ್ಯಾಯವಾಗಬಲ್ಲಂಥ ಪಕ್ಷವನ್ನು ಕಟ್ಟಲು ...ಟ್ಟಿಲ್ಲ; ಸೈದ್ಧಾಂತಿಕ ನೆಲೆಗಟ್ಟೂ ...

ಆದರೂ ರಾಜ್ಯದ ಪ್ರಸಕ್ತ ಪರಿಸ್ಥಿತಿಯಲ್ಲಿ ಜನತೆಗೆ ಏನಾದರೊಂದು ಪರಿಹಾರ ಮಾರ್ಗ ಬೇಕೇ ಬೇಕು. ಸಾಲದ್ದಕ್ಕೆ ವಿಕೇಂದ್ರೀಕೃತ 'ಗಣರಾಜ್ಯ' ವ್ಯವಸ್ಥೆಯಾಗದೆ ಎಲ್ಲ ಅಧಿಕಾರ ಕೇಂದ್ರ ಸರ್ಕಾರದ ಬಿಗಿಮುಷ್ಟಿಯಲ್ಲಿರುವ ನಮ್ಮ ದೇಶದ ಪರಿಸ್ಥಿತಿಯಲ್ಲಿ, ನಮ್ಮ ಪ್ರಾದೇಶಿಕ ಹಿತ—ಎಂದರೆ ರಾಜ್ಯದ ಜನತೆಯ ವಿಶಿಷ್ಟವಾದ ಆಶೋತ್ತರಗಳನ್ನು ಈಡೇರಿಸಬಲ್ಲ ವ್ಯವಸ್ಥೆಯೂ ಬೇಕಾಗಿದೆ

ಆದ್ದರಿಂದ ಸದ್ಯಕ್ಕೆ ಇನ್ನೊಂದೆರಡು ತೀಪೆ ಪಕ್ಷಗಳಾಗಿ, ಚುನಾವಣೆಗಳಲ್ಲಿ ಇದ್ದ ಬದ್ದ ಸಂಘಟನಾ ಶಕ್ತಿ, ಸಂಪನ್ಮೂಲ ಶಕ್ತಿಯನ್ನೆಲ್ಲ ವ್ಯಯ ಮಾಡುವ ಮೊದಲು ಈ ಗುಂಪುಗಳು ಬಹುಶಃ ತೆರೆದ ಮನಸ್ಸಿನಿಂದ ಇನ್ನಷ್ಟು ಯೋಚಿಸುವ ಅಗತ್ಯವಿದೆಯೆನ್ನಿಸುತ್ತದೆ.

ನಮ್ಮ ರಾಜ್ಯದಲ್ಲಿ ಸುಮಾರು 400 ಕೋಟಿ ರೂಪಾಯಿಗಳಷ್ಟು ತೆರಿಗೆ ಬಾಕಿ ವಸೂಲಾಗದೆ ನಿಂತಿರುವುದು, ಅಬ್ಕಾರಿ ಬಾಬತ್ತೊಂದರಲ್ಲೇ ದಿನಕ್ಕೆ ಒಂದು ಕೋಟಿ ರೂಪಾಯಿ ಸೋರಿಹೋಗುತ್ತಿರುವುದು, ಬೃಹತ್ ಮಂತ್ರಿಮಂಡಲದ ಜೊತೆಗೆ ಜಿಲ್ಲಾ ಪರಿಷತ್ತುಗಳ 'ಬಿಳಿಯಾನೆ'ಗಳೂ ಸೇರಿ ಬರೀ ನಿರರ್ಥಕ ಬಾಬಿಗೇ ಕೋಟ್ಯಾಂತರ ರೂಪಾಯಿ ಅಪವ್ಯಯವಾಗುತ್ತಿರುವುದು—ಮುಂತಾದ ಕೆಲವೇ ಐಟಂಗಳಲ್ಲಿ ಸೋರಿಕೆ ಮತ್ತು ದುರ್ವ್ಯಯವನ್ನು ಕಟ್ಟುನಿಟ್ಟಾಗಿ ತಡೆಗಟ್ಟುವಂತೆ ಮಾಡುವುದು ನಮ್ಮ ಜನಕ್ಕೆ ಸಾಧ್ಯವಾದರೆ ಒಳ್ಳೆ ಪರಿಣಾಮವಾದೀತು?

ಈ ಎಲ್ಲಾ ವಿವಿಧ ಗುಂಪುಗಳು, ಸಂಘಟನೆಗಳು ಮೊದಲಿಗೆ ಈ ವಿಚಾರದತ್ತ ಮನಸ್ಸು ಹರಿಸಿ, ಯಾವುದೇ ಸರ್ಕಾರ ಅಧಿಕಾರಕ್ಕೆ ಬಂದರೂ ಆರ್ಥಿಕ ರಂಗದಲ್ಲಿ ಕನಿಷ್ಠ ಇಷ್ಟು ಕೆಲಸಗಳನ್ನು ಮಾಡುವಂತೆ ಸಮರ್ಥವಾಗಿ ಒತ್ತಡ ಹೇರಬಲ್ಲ ರಂಗವೊಂದನ್ನು ರೂಪಿಸಿದರೆ, ಇನ್ನೊಂದು ಪಕ್ಷವಾಗಿ ಚುನಾವಣೆಗಿಳಿಯುವುದಕ್ಕಿಂತ ಹೆಚ್ಚಿನ ಕೆಲಸವನ್ನು ಜನತೆಗೆ ಮಾಡಿಕೊಟ್ಟಂತಾದೀತಲ್ಲವೆ?

ಹೀಗೇ ವ್ಯಾಪಕ ಚರ್ಚೆಗೊಳಗಾಗಿರುವ ಇನ್ನೊಂದು ವಿಷಯ ಪರಿಸರ ಸಂರಕ್ಷಣೆಯದು. ಒಂದೆಡೆ ಕಾರ್ಖಾನೆಗಳ ಮತ್ತು ಪೆಟ್ರೋಲ್ ವಾಹನಗಳ ಹೊಗೆ, ಧೂಳು ನಮ್ಮ ವಾತಾವರಣವನ್ನು ಕಲುಷಿತಗೊಳಿಸುತ್ತಿದ್ದರೆ ಇನ್ನೊಂದೆಡೆ ಇದ್ದ ಬದ್ದ ಕಾಡೆಲ್ಲ ಲೂಟಿಯಾಗಿ ಪರಿಸರ ಸಮತೋಲನ ಮತ್ತಷ್ಟು ಹದಗೆಡುವುದಲ್ಲದೆ ಮಳೆ–ಬೆಳೆ ಪರಿಸ್ಥಿತಿ ಕೂಡಾ ದಿಕ್ಕೆಡುತ್ತಿದೆ. ಈ ರೀತಿಯ ಅರಣ್ಯ ನಾಶದಿಂದ ಪರಿಸರ ಸಮತೋಲನದ ಪ್ರಮುಖ ಕೊಂಡಿಗಳಾದ ಎಷ್ಟೋ ಪ್ರಾಣಿ ಪಕ್ಷಿಗಳು ನಿರ್ನಾಮವಾಗುವ ಅಪಾಯ ಒದಗಿದೆಯಾದರೆ, ಕಾರ್ಖಾನೆಗಳ ಕೊಳಚೆಯಿಂದ ನದಿ–ಸಮುದ್ರಗಳ ನೀರೆಲ್ಲ ಕಲುಷಿತಗೊಂಡು ಮನುಷ್ಯರು, ಪ್ರಾಣಿಗಳು, ಜಲಚರಗಳು ಎಲ್ಲವೂ ಭೀಕರ ಅಪಾಯಕ್ಕೀಡಾಗಿವೆ.

ಈ ಬಗೆಗೆಲ್ಲ ಜನ ಸಾಮಾನ್ಯರಲ್ಲಿ ಅರಿವು ಮೂಡಿಸುವ ಪ್ರಯತ್ನಗಳು ಹೆಚ್ಚು ಹೆಚ್ಚು ಪರಿಣಾಮಕಾರಿಯಾಗುತ್ತ ಜನರಿಗೆ ಈ ವಿಚಾರದಲ್ಲಿ ಆಸಕ್ತಿ ಕೆರಳುತ್ತಿದ್ದಂತೆ, ನಿಸರ್ಗ ಸಂಪತ್ತಿನ ಆಗರವಾದ ಮಲೆನಾಡನ್ನು ಪ್ರತ್ಯೇಕ ರಾಜ್ಯವಾಗಿ ರೂಪಿಸಬೇಕೆಂಬ ಬೇಡಿಕೆಯೊಂದು ರೂಪುಗೊಳ್ಳುತ್ತಿದೆ

ಭೌಗೋಳಿಕ ಆಧಾರದ, ಪರಿಸರಾಧಾರಿತ ಪ್ರಪ್ರಥಮ ರಾಜ್ಯವಾಗುವ ಇದು ರಾಷ್ಟ್ರದಲ್ಲಿ ಹೆಚ್ಚುತ್ತಿರುವ ವಿಚ್ಛಿದ್ರೀಕರಣ ಪ್ರವೃತ್ತಿಗೊಂದು ಪರಿಣಾಮಕಾರಿ ಪರಿಹಾರವಾಗುವುದು; ಹೀಗೆ ಒಂದೊಂದು ದೊಡ್ಡದಾದ ಭಾಷಾ ರಾಜ್ಯ ಮೂರ್ನಾಲ್ಕು ತುಂಡಾಗಿ ಒಂದೇ ಭಾಷೆ ರಾಜ್ಯ ಭಾಷೆಯಾದಾಗ ಸದ್ಯದ ಭಾಷಾಂಧತೆಯು ಬಲು ಸ್ಪರ್ಧಾತ್ಮಕ ಆಡಳಿತ ಸುಧಾರಣೆ ಯತ್ನಗಳಿಗೆ ನಾಂದಿಯಾಗುತ್ತದೆ; ತ್ವರಿತವಾಗಿ ಬೋಳಾಗುತ್ತಿರುವ ಮರಗಿಡಗಳ ಸಂರಕ್ಷಣೆ, ಮಲೆನಾಡಿನ ಸಂಸ್ಕೃತಿಯ ಸಂರಕ್ಷಣೆಯೂ ಸಾಧ್ಯ—ಇದು ಈ ರಾಜ್ಯ ಸ್ಥಾಪನೆಯ ಬೇಡಿಕೆ ಮಂಡಿಸುತ್ತಿರುವವರ ಪ್ರತಿಪಾದನೆ. ಇವರೆಲ್ಲ ಈ ರಾಜ್ಯೋತ್ಸವ ದಿನದಂದು ಕುಮಟಾದಲ್ಲಿ ಸಮಾವೇಶಗೊಂಡು ಈ ಬಗ್ಗೆ ಸರ್ಕಾರವನ್ನು ಒತ್ತಾಯಿಸುವ ನಿರ್ಣಯ ಕೈಗೊಳ್ಳಲಿದ್ದಾರೆ.

ಬೇರೆಲ್ಲ ಹತ್ತು ಹಲವು ವಿಚಾರಗಳ ಜೊತೆಗೆ ಈ ಕೆಲವು ವಿಚಾರಗಳನ್ನು ಕುರಿತ ಚಿಂತನೆಗಳು ಈ ಸಂದರ್ಭಕ್ಕೆ ಬಹಳಷ್ಟು ಪ್ರಸ್ತುತವಾಗಿವೆ ಎನ್ನಿಸುತ್ತದೆ.

—ಸಂಪಾದಕ.

# ಮಾತಿಗಿಂತ ಕೃತಿ ಮೇಲು: ಕರ್ನಾಟಕ ಸರ್ಕಾರದ ಸಾಧನೆ

**ಕನ್ನಡ ರಾಜ್ಯೋತ್ಸವ ದಿನ; ಕನ್ನಡ ಮಾತನಾಡುವ ಜನರೆಲ್ಲ ಒಂದುಗೂಡಿ, ಒಂದೇ ಆಡಳಿತಕ್ಕೆ ಒಳಪಟ್ಟ ಅಪೂರ್ವ ದಿನ. ಈ ಮಂಗಳ ದಿನದ ಮೂವತ್ತೊಂದನೆಯ ವಾರ್ಷಿಕೋತ್ಸವವನ್ನು ಆಚರಿಸುತ್ತಿದ್ದೇವೆ. ಈ ಮೂರು ದಶಕಗಳಲ್ಲಿ ಕನ್ನಡ ನಾಡು, ಕನ್ನಡ ನುಡಿ, ಸಂಸ್ಕೃತಿ, ಸಾಹಿತ್ಯ, ಕಲೆಗಳ ಸಂವರ್ಧನೆಗಾಗಿ ಸರ್ಕಾರ ಅವಿರತವಾಗಿ ಶ್ರಮಿಸಿದೆ. ಕನ್ನಡ ಜನತೆಯ ಕ್ಷೇಮಕ್ಕಾಗಿ ಹಲವು ಹತ್ತು ಬಗೆಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕಾರ್ಯಗತಗೊಳಿಸುತ್ತಿದೆ. ಈ ಎಲ್ಲಾ ಕಾರ್ಯಗಳ ಸಿಂಹಾವಲೋಕನಕ್ಕೆ ರಾಜ್ಯೋತ್ಸವ ದಿನ-ಪ್ರಶಸ್ತ ದಿನ.**

ಈ ಎಲ್ಲಾ ಸಾಧನೆಗಳಿಗೆ ಜನತೆಯೇ ಕಾರಣ ಎಂಬುದು ಸರ್ಕಾರದ ದೃಢವಾದ ನಂಬಿಕೆ. ಜನತೆಯ ಕಲ್ಯಾಣದ ಬಗ್ಗೆ ಕಳಕಳಿಯುಳ್ಳ ಕರ್ನಾಟಕ ಸರ್ಕಾರ ಈ ಆನಂದದ ಸಂದರ್ಭದಲ್ಲಿ ಎಲ್ಲ ಕನ್ನಡಿಗರಿಗೂ ತನ್ನ ಶುಭಾಶಯಗಳನ್ನು ಕೋರುತ್ತದೆ ಒಟ್ಟು ಸಮಾಜದ ಆಗತ್ಯಗಳಿಗೆ ಸಂಬಂಧಿಸಿದಂತೆ ಧೋರಣೆಗಳನ್ನು ರೂಪಿಸಿ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ಬದ್ಧವಾಗಿದೆ ಎಂಬ ಅಂಶವನ್ನು ಪುನರ್ ದೃಢೀಕರಿಸುತ್ತದೆ.

## ಜನತೆಗೆ ಅಧಿಕಾರ

ಜಿಲ್ಲಾ ಪರಿಷತ್ತುಗಳನ್ನು ರಚಿಸುವುದರ ಮೂಲಕ ಮಹಾತ್ಮ ಗಾಂಧೀಜಿಯವರ ಕನಸು ನನಸಾಗಿದೆ. "ಜನತೆಯ ಕೈಗೆ ಅಧಿಕಾರ" –ಇದು ಈಗ ಕಾರ್ಯರೂಪಕ್ಕೆ ಬಂದಿದೆ. ಮತ ಚಲಾಯಿಸಲು ವಯೋಮಿತಿಯನ್ನು ಇಳಿಸುವುದು, ಮಹಿಳೆಯರಿಗೆ ಮತ್ತು ಪರಿಶಿಷ್ಟ ಜಾತಿ–ಜನಾಂಗದವರಿಗೆ ಮೀಸಲಾತಿ ಮುಂತಾದ ಅನೇಕ ಚುನಾವಣಾ ಸುಧಾರಣೆಗಳು, ಆಡಳಿತ ವಿಕೇಂದ್ರೀಕರಣದ ಆಶಯವನ್ನು ನಿಜವಾಗಿ ಅರ್ಥಪೂರ್ಣವಾಗಿಸಿ ಪ್ರಜಾಪ್ರಭುತ್ವ ತತ್ವವನ್ನು ಸಾರ್ಥಕಗೊಳಿಸಿವೆ.

ಸ್ಥಳೀಯ ಸಂಸ್ಥೆಗಳ ಚುನಾವಣೆ, ಪ್ರಜಾಪ್ರಭುತ್ವ ಪದ್ಧತಿಯನ್ನು ಪುನರ್ ಚೈತನ್ಯಗೊಳಿಸಿದೆ. 'ಲೋಕಾಯುಕ್ತ ರಚನೆ' ಸಾರ್ವಜನಿಕ ಬದುಕಿನಲ್ಲಿ ಪ್ರಾಮಾಣಿಕತೆಯನ್ನು ತರುವ ದಿಶೆಯಲ್ಲಿ ಒಂದು ವಿನೂತನ ಪ್ರಯತ್ನ. ಆಡಳಿತದ ಎಲ್ಲಾ ಹಂತಗಳಲ್ಲೂ ಕನ್ನಡ ಬಳಕೆಯಿಂದ ಆಡಳಿತವನ್ನು ಜನರ ಸಮೀಪಕ್ಕೆ ತರಲಾಗಿದೆ. ಕಲೆ, ಸಂಸ್ಕೃತಿ ಮತ್ತು ಕ್ರೀಡಾ ಕ್ಷೇತ್ರಗಳಲ್ಲಿ ಆಗಿರುವ ಪ್ರಗತಿ ಕಣ್ಣಿಗೆ ಕಾಣುವಂಥದು

## ಭೀಕರ ಬರಗಾಲ

ಕಳೆದ 5 ವರ್ಷಗಳಿಂದ ರಾಜ್ಯದಲ್ಲಿ ಹಿಂದೆಂದೂ ಕಂಡರಿಯದ ಭೀಕರ ಬರಗಾಲ. ಬರಪೀಡಿತರಿಗೆ ಸಕಾಲಿಕ ನೆರವು ನೀಡಲು ಸರ್ಕಾರ ಲಭ್ಯವಿರುವ ಸಂಪನ್ಮೂಲಗಳನ್ನು ವ್ಯವಸ್ಥಿತವಾಗಿ ಬಳಸಿದೆ. ಬರಪರಿಹಾರ ಕಾರ್ಯಗಳು ಸಮಸ್ಯೆಯನ್ನು ಪರಿಹರಿಸುವುದರ ಜೊತೆಗೆ ಶಾಶ್ವತ ಸಾರ್ವಜನಿಕ ಆಸ್ತಿ ನಿರ್ಮಾಣಕ್ಕೂ ನೆರವಾಗಿದೆ. ಇಂಥ ವಿಷಮ ಪರಿಸ್ಥಿತಿಯಲ್ಲೂ ಸರ್ಕಾರ ಪ್ರಗತಿಪರ ಕಾರ್ಯಕ್ರಮಗಳನ್ನು ಕಡೆಗಣಿಸಿಲ್ಲ.

## ನೀರಿಗಾಗಿ ಶೋಧ

1983 ಮತ್ತು 1987ರ ಅವಧಿಯಲ್ಲಿ 1104 ಹಳ್ಳಿಗಳಿಗೆ ನಲ್ಲಿಗಳ ಮೂಲಕ ನೀರನ್ನು ಒದಗಿಸಲಾಗಿದೆ. ಮತ್ತು 47391 ಕೊಳವೆ ಬಾವಿಗಳನ್ನು ತೋಡಲಾಗಿದೆ.

## ಹಸಿರು ಕಾರ್ಡ್ ಯೋಜನೆ

ಬಡವರು ಆಹಾರ ಧಾನ್ಯ ಮತ್ತು ಬಟ್ಟೆಗಳನ್ನು ರಿಯಾಯಿತಿ ದರಗಳಲ್ಲಿ ಕೊಳ್ಳಲು, 'ಹಸಿರು ಕಾರ್ಡ್' ಒಂದು ವರದಾನ. 30 ಲಕ್ಷಕ್ಕೂ ಹೆಚ್ಚು ಕುಟುಂಬಗಳಿಗೆ ಇದರ ಪ್ರಯೋಜನ.

## ಅಗತ್ಯವುಳ್ಳವರಿಗೆ ನೆರವು

ಆಸರೆಯಿಲ್ಲದ ಅನಾಥ ವಿಧವೆಯರಿಗೆ 'ವಿಧವಾ ಮಾಸಾಶನ', 3,64,000 ಫಲಾನುಭವಿಗಳಿಗೆ ತಿಂಗಳಿಗೆ 50 ರೂ.ಗಳ ಮಾಸಿಕ ನೆರವು; ಕೃಷಿಕಾರ್ಮಿಕ ಗರ್ಭಿಣಿ ಸ್ತ್ರೀಯರಿಗೆ 3 ತಿಂಗಳ ಅವಧಿಗೆ ಮಾಸಿಕ 100 ರೂ.ಗಳ ಹೆರಿಗೆ ಭತ್ಯ, ಬಡವರು ಕಡಿಮೆ ಖರ್ಚಿನಲಿ ಮದುವೆ ಮಾಡಲು ಅನುಕೂಲವಾಗುವ 'ತಾಳಿಭಾಗ್ಯ' ಯೋಜನೆಯಿಂದ ಸಾವಿರಾರು ಬಡ ಕುಟುಂಬಗಳಿಗೆ ಸಾಲದ ಹೊರೆಯಿಂದ ಬಿಡುಗಡೆ.

## ಉಚಿತ ಪಠ್ಯ ಪುಸ್ತಕ ಮತ್ತು ಸಮವಸ್ತ್ರ

ಬಡವರ ಮಕ್ಕಳಿಗೆ ಶಿಕ್ಷಣ ಸೌಲಭ್ಯ ವಿಸ್ತರಣೆಯ ದಿಸೆಯಲ್ಲಿ ಉಚಿತ ಪಠ್ಯ ಪುಸ್ತಕ ಮತ್ತು ಸಮವಸ್ತ್ರ ವಿತರಣೆ ಕ್ರಾಂತಿಕಾರೀ ಹೆಜ್ಜೆ ಇದರಿಂದ ರಾಜ್ಯದ 70 ಲಕ್ಷಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ಮತ್ತು 155 ಲಕ್ಷಕ್ಕೂ ಹೆಚ್ಚು ಮಕ್ಕಳಿಗೆ ಉಚಿತ ಪಠ್ಯ ಪುಸ್ತಕ ಲಭ್ಯ.

## ಒಣ ಬೇಸಾಯಾಭಿವೃದ್ಧಿ

ಮಳೆಯನ್ನು ಆಧರಿಸಿದ ರಾಜ್ಯದ ಸುಮಾರು ಶೇಕಡಾ 80 ರಷ್ಟು ರೈತರಿಗೆ ನೆರವಾಗುವುದು ಈ ಯೋಜನೆಯ ಉದ್ದೇಶ. ನೀರಿನ ಸಮರ್ಪಕ ಬಳಕೆಯ ವ್ಯವಸ್ಥೆ, ಕಡಿಮೆ ವೆಚ್ಚ, ಅಧಿಕ ಉತ್ಪಾದನೆ, ಕೃಷಿ ಮತ್ತು ಪಶುಸಂಗೋಪನೆಗಳ ಪೂರಕ ಬೆಳವಣಿಗೆ ಇವು ಈ ಯೋಜನೆಯ ವ್ಯಾಪ್ತಿಗೆ ಬರುವ ಪ್ರಮುಖ ಅಂಶಗಳು. ಈ ಯೋಜನೆಯಡಿಯಲ್ಲಿ 1,11,549 ಹೆಕ್ಟೇರ್ ಕೃಷಿ ಭೂಮಿ ಮತ್ತು 11,396 ಹೆಕ್ಟೇರ್‌ಗಳಷ್ಟು ಕೃಷಿಗೆ ಯೋಗ್ಯವಲ್ಲದ ಭೂ ಪ್ರದೇಶವನ್ನು ಅಭಿವೃದ್ಧಿಗೊಳಿಸಲಾಗಿದೆ.

## ಸಾಮಾಜಿಕ ಅರಣ್ಯ

1983ರಿಂದ ಕಾರ್ಯಗತವಾಗುತ್ತಿರುವ ಸಾಮಾಜಿಕ ಅರಣ್ಯ ಯೋಜನೆಯಿಂದ 23,757 ಹೆಕ್ಟೇರ್‌ನಷ್ಟು ಭೂಪ್ರದೇಶ ಹಸಿರಾಗಿದೆ. ಗಿಡ ನೆಟ್ಟು ಬೆಳೆಸುವ ಆಸಕ್ತಿಯುಳ್ಳ ಜನರಿಗೆ ಸಸಿ ಮತ್ತು ಸಲಹೆಯನ್ನು ಉಚಿತವಾಗಿ ಒದಗಿಸಲಾಗುತ್ತಿದೆ. ಈವರೆಗೆ 3300 ಲಕ್ಷ ಸಸಿಗಳನ್ನು ನೆಡಲಾಗಿದೆ.

ಕೈಗಾರಿಕಾ ಕ್ಷೇತ್ರದ ಒಂದು ಮಹತ್ತರ ಸಾಧನೆಯೆಂದರೆ ಕೈಗಾರಿಕೆಗಳ ವಿಕೇಂದ್ರೀಕರಣ—ಪರಿಣಾಮವಾಗಿ ರಾಜ್ಯದಾದ್ಯಂತ ಕೈಗಾರಿಕೆಗಳು ವಿಕಾಸವಾಗಲು ಮುಕ್ತ ವಾತಾವರಣ.

**ಕರ್ನಾಟಕದಲ್ಲಿ ಈಗ ಹೊಸ ಮತ್ತು ಕ್ರಾಂತಿಕಾರಿ ಕಾರ್ಯಕ್ರಮಗಳು. ಜನತೆಯ ಬದುಕಿನ ಗುಣಮಟ್ಟವನ್ನು ಸುಧಾರಿಸುವುದೇ ಈ ಎಲ್ಲ ಕಾರ್ಯಕ್ರಮದ ಗುರಿ. ಈ ಐತಿಹಾಸಿಕ ದಿನದಂದು ಜನತೆಯ ಸೇವೆಗೆ ಸರಕಾರ ಸದಾ ಕಂಕಣಬದ್ಧ ಎಂಬುದನ್ನು ಮತ್ತೊಮ್ಮೆ ದೃಢಪಡಿಸುತ್ತದೆ.**



ಕರ್ನಾಟಕ ವಾರ್ತೆ

ಸಂಖ್ಯೆ/ವಾಪ್ರಇ/ವಾಪ್ರವಿ/ಸಿಆರ್/ ಸಿ 1/ ಸಿ 3/87-88 ದಿ. 22.10.1987

## ಓದುಗರ ಪತ್ರಗಳು

### ಕ. ವಿ. ಮಂ. ಲೈನ್‌ಮನ್‌ಗೆ ಗ್ರಾಮಸ್ಥರ ಕೃತಜ್ಞತೆ

ಮಾನ್ಯರೆ,

ತಾ. 17-10-87ರಂದು ಬಿ. ಜಿ. ಕಟ್ಟೆಯ ಟ್ರಾನ್ಸ್‌ಫಾರ್ಮರ್ ಕೆಟ್ಟು ಹೋಗಿ, ಅದಕ್ಕೆ ಸಂಬಂಧ ಪಟ್ಟ ವಿದ್ಯುತ್ ಬಳಕೆದಾರರಿಗೆ ಬೆಳಕಿನ ಹಬ್ಬವಾದ ದೀಪಾವಳಿಯನ್ನು ಕತ್ತಲೆಯಲ್ಲೇ ಕಳೆಯಬೇಕಾಗುವ ಭಯ ಕಾಡಿತ್ತು. ಆದರೆ ಕ.ವಿ.ಮಂ ಲೈನ್‌ಮನ್ ಮುನೀರ್‌ರವರು ಬಹಳ ಶ್ರಮಪಟ್ಟು ಟ್ರಾನ್ಸ್‌ಫಾರ್ಮರನ್ನು ದುರಸ್ತಿಗೊಳಿಸಿ, ಹಬ್ಬಕ್ಕೆ ಬೆಳಕು ನೀಡಿದರು.

ಯಾವುದೇ ಕೆಟ್ಟ ಅಭ್ಯಾಸಗಳಿಲ್ಲದೆ ನಿಷ್ಠೆಯಿಂದ ದುಡಿಯುವ ಈ ಕಾರ್ಮಿಕನಿಗೂ, ಇವರ ಸೇವೆಯನ್ನು ಇಲ್ಲಿಗೆ ಒದಗಿಸಿ ಕೊಟ್ಟ ಇಂಜಿನಿಯರ್ ಕೇಶವ ಮೂರ್ತಿಯವರಿಗೂ ಕೃತಜ್ಞತೆಗಳೊಂದಿಗೆ ದೀಪಾವಳಿ ಶುಭಾಶಯಗಳನ್ನು ಸಲ್ಲಿಸುತ್ತೇವೆ.

ವಿದ್ಯುತ್ ಬಳಕೆದಾರರು
(19 ಜನರ ಸಹಿಗಳಿವೆ.)

## ಕಾನ್ವೆಂಟ್ ಶಾಲೆ : ಸಮಸ್ಯೆಗಳ ಬಗ್ಗೆ ಸೌಹಾರ್ದಯುತ ಚರ್ಚೆ, ಒಡಂಬಡಿಕೆ

ಮಾನ್ಯರೆ,

ಕೊಪ್ಪ ಕಾನ್ವೆಂಟ್ ಶಾಲೆಯಲ್ಲಿ ಮಕ್ಕಳು ಎದುರಿಸುತ್ತಿದ್ದ ಕೆಲವು ತೀವ್ರ ರೀತಿಯ ಸಮಸ್ಯೆಗಳ ಬಗ್ಗೆ ಸೆ. 30 ರಂದು ಪೋಷಕರ ಪ್ರತಿನಿಧಿಗಳ ನಿಯೋಗವೊಂದು ಶಾಲೆಯ ಆಡಳಿತ ವರ್ಗದವರೊಡನೆ ಚರ್ಚಿಸಿ, ಒಂದು ಸೌಹಾರ್ದಯುತವಾದ ಇತ್ಯರ್ಥಕ್ಕೆ ಬರಲಾಯಿತು.

ಶಾಲೆಯ ಕಟ್ಟಡ ನಿಧಿಗೆಂದು 50 ಪೈಸೆ ಮತ್ತು 5ರೂ. ಬೆಲೆಯ 'ಕೂಪನ್'ಗಳ ಕೆಲವು ಹಾಳೆಗಳನ್ನು ಪ್ರತಿಯೊಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಗೂ ತಲಾ 60ರಿಂದ 200ರೂ. ವರೆಗೂ ಕೊಟ್ಟಿದ್ದು, ಇವುಗಳನ್ನು ಮಾರಲೇಬೇಕೆಂದು ಒತ್ತಾಯಿಸುವುದಿಲ್ಲ, ಹಾಗೆಯೇ ವಾಪಸು ತಂದು ಕೊಟ್ಟರೆ ಹಿಂತೆಗೆದುಕೊಳ್ಳುತ್ತೇವೆ ಎಂದು ಆಡಳಿತ ವರ್ಗ ಭರವಸೆ ನೀಡಿದೆ.

ಯಾವುದೇ ಮಕ್ಕಳಿಗೆ ಮಾನಸಿಕವಾಗಿ ಪರಿಣಾಮ ಆಗುವಂಥ ಬೆದರಿಕೆ, ಚುಚ್ಚುಮಾತು, ಅನುತ್ತೀರ್ಣಗೊಳಿಸುವಿಕೆ-ಇತ್ಯಾದಿಗಳಿಗೆ ಅವಕಾಶ ಕೊಡುವುದಿಲ್ಲ ಎಂತಲೂ,

ಹೆಣ್ಣು ಮಕ್ಕಳು ಹೂ ಮುಡಿದು ಬರುವುದಕ್ಕೆ ಆಕ್ಷೇಪಿಸುವುದಿಲ್ಲ ಎಂದೂ ಭರವಸೆ ನೀಡಲಾಗಿದೆ. (ಅದರಿಂದ ಕೊಠಡಿಗಳೆಲ್ಲಿ ಕಸ ಆಗುತ್ತದೆಂದು ಆಕ್ಷೇಪಿಸಲಾಗಿತ್ತು. ಆದರೆ ಮಕ್ಕಳೇ ಕಸ ಗುಡಿಸುತ್ತಾರೆಂಬ ಕಾರಣಕ್ಕೆ ಈ ಒಪ್ಪಿಗೆ ನೀಡಲಾಯ್ತು.)

ಇದಕ್ಕೆ ಪ್ರತಿಯಾಗಿ, ಆಡಳಿತ ವರ್ಗ ತನಗೆ ಆರ್ಥಿಕ ಅಡಚಣೆ, ಅನಿವಾರ್ಯತೆಗಳಿದ್ದರೆ ನೇರವಾಗಿ ಅಥವಾ ಮಕ್ಕಳ ಕೈಲಿ ಕಾಗದ ಕಳಿಸುವ ಮೂಲಕ ತಂದೆ-ತಾಯಿ/ಪೋಷಕರನ್ನು ಸಂಪರ್ಕಿಸಬಹುದೆಂದು ಪೋಷಕರ ಪರವಾಗಿ ಭರವಸೆ ನೀಡಲಾಯ್ತು.

ನಿಯೋಗದ ಪರವಾಗಿ
ಕವಿ ಪಟವರ್ಧನ್
ಕೊಪ್ಪ

## ಬಂಡಿಗಡಿಯಲ್ಲಿ ಉಚಿತ ಕಾನೂನು ನೆರವು ಶಿಬಿರ

'ಬಂಡಿಗಡಿ : ನ. ರಾ. ಪುರದ ಉಚಿತ ಕಾನೂನು ನೆರವು ಸಮಿತಿ ಆಶ್ರಯದಲ್ಲಿ ಅ. 25ರಂದು ಇಲ್ಲಿ ಉಚಿತ ಕಾನೂನು ನೆರವು ಶಿಬಿರ ಏರ್ಪಟ್ಟಿತ್ತು.

ಚಾವಲ್ಮನೆ ಮಂಡಲ ಪ್ರಧಾನರಾದ ಕೆ. ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ಜಿ. ಪ. ಸದಸ್ಯರೂ ವಕೀಲರೂ ಆದ ನಾಗಚಂದ್ರಶೇಖರ್ ಸಮಾರಂಭವನ್ನು ಉದ್ಘಾಟಿಸಿದರು.

ವಕೀಲರುಗಳಾದ ಎಚ್. ಎಸ್. ರಾಮರಾವ್, ಸೀತೂರು ಚಂದ್ರಶೇಖರ ರಾವ್, ಎಚ್. ಕೃಷ್ಣಮೂರ್ತಿ, ಶಶಿಕಲಾ ಉರಣ್‌ಕರ್ ಕಾನೂನು ಸಮಸ್ಯೆಗಳ ಬಗ್ಗೆ ಸಲಹೆ, ಪರಿಹಾರ ನೀಡಿದರು.

ಸಮಿತಿ ಕಾರ್ಯದರ್ಶಿ ಪಿ.ಆರ್. ಶ್ರೀನಿವಾಸಮೂರ್ತಿ ಸ್ವಾಗತಿಸಿ ವಂದಿಸಿದರು.

(ವರದಿ : ಬಿ. ಎನ್. ಭಾಸ್ಕರ್)

**ಶಿವಮೊಗ್ಗ ಅಡಿಕೆ ಧಾರಣೆ**
ತಾ|| 29.10.1987
ಸರಕು : 3700 – 5020
ಬೆಟ್ಟೆ : 2079 – 2750
ಗೊರಬಲು : 869 – 1125

**ಸಾಗರ ಅಡಿಕೆ ತಾ|| 27.10.1987**
ಇಡಿ ಅಡಿಕೆ ರೂ. 1905–2129
ಚಾಲಿ ರೂ. 1359–1376
ಸಿಪ್ಪೆ ಗೋಟು ರೂ. 722
ಆಪಿ ರೂ. 4485

**ಮಂಗಳೂರು ವಿಲಕ್ಕಿ ಧಾರಣೆ**
ದಿನಾಂಕ 30-10-1987
ರೂ. 75 – 105
ಕಾಳು ಮೆಣಸು 5536

## ಬಡವರ ಧ್ವನಿಯನ್ನು ಬ್ಯಾಂಕಿಗೆ ತಲುಪಿಸಿದ 'ಸಾಲ ಮೇಳ'

(4ನೇ ಪುಟದಿಂದ)

ಆದ್ದರಿಂದ ಈ ದೇಶದ ಅರ್ಥ ವ್ಯವಸ್ಥೆ ಹಾಳಾಗುತ್ತಿದ್ದರೆ ಅದು ಇಲ್ಲಿನ ನೀತಿಗೆಟ್ಟ ಕೈಗಾರಿಕೋದ್ಯಮಿಗಳಿಂದ, ಭ್ರಷ್ಟ ರಾಜಕಾರಣಿಗಳಿಂದ, ದುಷ್ಟ ಅಧಿಕಾರಿಗಳಿಂದ, ಆಸೆಗೆ ಮಿತಿಯಿಲ್ಲದ ಶ್ರೀಮಂತರಿಂದ, ಇತ್ಯಾದಿಗಳಿಂದ. (ಸ್ವಿಸ್ ಬ್ಯಾಂಕ್ ಬಗೆಗೆ ಈಚೆಗೆ ಬೆಳಕಿಗೆ ಬಂದ ಸಂಗತಿಗಳು ಏನು ಹೇಳುತ್ತವೆ ?)

**ಆತ್ಮ ವಂಚಕರು**

ಇನ್ನು ನಮ್ಮ ಮಧ್ಯೆ ಇರುವ ಆತ್ಮ ವಂಚಕ ಜನರ ವಿಚಾರ ಹೇಳಲಿಕ್ಕೆ ಹೋದರೆ ಅದಕ್ಕೆ ಕೊನೆಯೇ ಇಲ್ಲ. ಸಾವಿರಾರು ರೂ. ಸಂಬಳ ಪಡೆಯುವ ಅಧಿಕಾರಿ ತನ್ನ ಹೆಸರಿನಲ್ಲಿ, ತನ್ನ ಹೆಂಡತಿ-ಮಕ್ಕಳ ಹೆಸರಿನಲ್ಲಿ ಬ್ಯಾಂಕಿನಿಂದ ಸಾಲ ಪಡೆದು ಸಾಲದ ಖಾತೆಗೆ ಒಂದು ಪೈಸೆಯನ್ನೂ ಜಮಾ ಮಾಡದಿದ್ದರೂ ಸಾಲ ಮೇಳದ ವಿರುದ್ಧ ಕಿಡಿ ಕಾರುವುದು, ಹರಿಜನರ-ಬಡವರ ಬಗ್ಗೆ ತಾತ್ಸಾರದಿಂದ ಮಾತನಾಡುವುದನ್ನು ನೋಡಿದರೆ ತನ್ನ ಎಲೆಯಲ್ಲಿ ಬಿದ್ದ ಕತ್ತೆಯ ಪರಿವೆ ಇವರಿಗೆ ಇದ್ದ ಹಾಗೆ ಇಲ್ಲ. ಇನ್ನು ಬಡ ಹರಿಜನರಿಂದ ಪ್ರತ್ಯೇಕಗೊಂಡ ದ್ವೀಪದಂತಿರುವ ವಿವಿಧ ಇಲಾಖೆಗಳ ಹರಿಜನ ನೌಕರರು ಸಾಲ ಮೇಳದಲ್ಲಿ ಸಾಲ ಪಡೆಯುವ ಹರಿಜನರ ಬಗ್ಗೆ ತಾತ್ಸಾರದಿಂದ ಮಾತನಾಡುವುದನ್ನು ಕೇಳಿದಾಗ ಇವರೆಲ್ಲ ಆತ್ಮವಂಚಕರಾಗಿ ನಮ್ಮ ಮಧ್ಯೆ ಇರುವ ದುರಂತ ವ್ಯಕ್ತಿಗಳಾಗಿ ಕಾಣಿಸುತ್ತಾರೆ. ಈ ಸಂಕ್ರಮಣ ಕಾಲದಲ್ಲಾದರೂ ಇವರೆಲ್ಲ ಈ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

**'ಜನಾರ್ದನ' ಸೇವೆ ಮಾತ್ರ ?**

ಇನ್ನು, ಬ್ಯಾಂಕಿನ ಉನ್ನತ ಅಧಿಕಾರಿಗಳು ಈ ಸಾಲಮೇಳವನ್ನ ಎಷ್ಟರ ಮಟ್ಟಿಗೆ ಯಶಸ್ವಿಗೊಳಿಸುತ್ತಾರೆ ಎಂಬ ವಿಚಾರ. ನನಗೆ ತಿಳಿದ ಮಟ್ಟಿಗೆ, ಬರೀ "ಜನಾರ್ದನ ಸೇವೆ"ಯಲ್ಲಿಯೇ ನಿರತರಾಗಿರುವ ಇವರು ಬಡವರಿಗೆ ಸಾಲ ಕೊಡುವ ವಿಚಾರದಲ್ಲಿ ಪ್ರಾಮಾಣಿಕರಾಗಿಲ್ಲ. ಹೆಚ್ಚಿನವರು ಈ ವಿಚಾರಕ್ಕೆ ಹುಟ್ಟಾ ವೈರಿಗಳಾಗಿರುತ್ತಾರೆ. ಮಂತ್ರಿಗಳ ಭಾಷಣಕ್ಕೆ ವೇದಿಕೆ ನಿರ್ಮಾಣ, ಪ್ರಚಾರ, ಇತ್ಯಾದಿಗಳಲ್ಲಿ ಇಡುವ ಮುತುವರ್ಜಿ ಸಾಲ ಕೊಡುವುದರಲ್ಲಿ ಇರುವುದಿಲ್ಲ. ಈ ರೀತಿಯಲ್ಲಿ ಪೂಜಾರಿಯವರ ಗಮನಕ್ಕೆ ಬರುವ ಹಾಗೆ ಉನ್ನತ ಹುದ್ದೆಗಳ ಮೇಲೆ ಕಣ್ಣಿಟ್ಟುಕೊಂಡೇ ಕೆಲಸ ಮಾಡುವವರು ಹೆಚ್ಚು. ಇದು ಪೂಜಾರಿಯವರಿಗೆ ತಿಳಿದಿದೆ ಎಂದು ನಂಬಿದ್ದೇನೆ.

ಮಾನ್ಯ ಜನಾರ್ದನ ಪೂಜಾರಿಯವರು ಮಂತ್ರಿಯಾದ ಲಾಗಾಯ್ತಿನಿಂದಲೂ ಆರ್ಥಿಕವಾಗಿ ಹಿಂದುಳಿದವರ ಬಗ್ಗೆ ಪ್ರಾಮಾಣಿಕ ಕಳಕಳಿಯಿಂದ ದುಡಿಯುತ್ತಿರುವವರು. ವೈಯಕ್ತಿಕ ಜೀವನದಲ್ಲಿ ಶುಚಿತ್ವವನ್ನು ಕಾಪಾಡಿಕೊಂಡು ಬಂದವರು. ಇವರ ಸಾಲ ಮೇಳದಂತಹ ಕ್ರಾಂತಿಕಾರಿ ಯೋಜನೆಯಿಂದ ಜನಸಾಮಾನ್ಯ ನೇರವಾಗಿ ಬ್ಯಾಂಕಿಗೆ ತೆರಳಿ ಸಾಲ ಪಡೆಯುವ ಶಕ್ತಿ ಪಡೆದಿದ್ದಾನೆ.

ಈ ದಿಶೆಯಲ್ಲಿ ಪೂಜಾರಿಯವರು ನಿಸ್ಸಂಶಯವಾಗಿ 'ಬಡವರ ಧ್ವನಿಯನ್ನು ಬ್ಯಾಂಕಿಗೆ ತಲುಪಿಸಿದ ರಾಯಭಾರಿಯಾಗಿದ್ದಾರೆ; ವರ್ಗ ಹಿತಾಸಕ್ತಿಯ ಕರಾಳ ಮುಡುವಾಗಿರುವ ಈ ನಮ್ಮ ಸಮಾಜದಲ್ಲಿ ಚಲನೆ ಉಂಟು ಮಾಡಲು ಅತ್ಯಗತ್ಯವಾಗಿ ಆಗಲೇಬೇಕಿರುವ ವರ್ಗ ಸಂಘರ್ಷದ 'ವೇಗವರ್ಧಕ'ವಾಗಿದ್ದಾರೆ.

ಇವರ ಈ ಸಾಲಮೇಳ ಪಕ್ಷಕ್ಕೆ ಮಾತ್ರ ಸಂಬಂಧಿಸದೆ ಜನಾಂದೋಳನದ ರೂಪ ಪಡೆಯಲಿ ಎಂದು ಈ ಸಂದರ್ಭದಲ್ಲಿ ಹಾರೈಸುತ್ತೇನೆ. ಈ ಎಲ್ಲಾ ವಿಚಾರಗಳನ್ನು ನಾನೊಬ್ಬ ಬ್ಯಾಂಕ್ ನೌಕರನಾಗಿ ಅನುಭವದ ಮೂಸೆಯಿಂದ ಹೊರಹಾಕುತ್ತಿದ್ದೇನೆ.

—ಆ. ನಾ ಸೇರಿಗಾರ್,
ಹರಿಹರಪುರ

[ಈ ಲೇಖನದ ಬಗ್ಗೆ ಸಮತೋಲಿತ ಚಿಂತನೆಯನ್ನೊಳಗೊಂಡ ಪ್ರತಿಕ್ರಿಯೆಗಳಿಗೆ ಆಹ್ವಾನವಿದೆ. —ಸಂ.]

## ಭದ್ರಾ ಮೇಲ್ದಂಡೆ ಯೋಜನೆ ವಿರೋಧಿಸಿ ಉಪವಾಸ

ನರಸಿಂಹರಾಜಪುರ : ಈ ತಾಲ್ಲೂಕಿನ ಮಾಗುಂಡಿಯ ಬಳಿ ಭದ್ರಾ ನದಿಗೆ ಇನ್ನೊಂದು ಅಣೆಕಟ್ಟು ನಿರ್ಮಿಸಲು ಯೋಜಿಸಲಾಗಿರುವುದನ್ನು ವಿರೋಧಿಸಿ, ಮೂಡುಬಾಗಿಲಿನ ಎಂ. ಐ. ಶ್ರೀನಿವಾಸ ಮೂರ್ತಿಯವರು 2 ದಿನ ಉಪವಾಸ ಸತ್ಯಾಗ್ರಹ ಮಾಡಲು ನಿರ್ಧರಿಸಿದ್ದಾರೆ. ಡಿಸೆಂಬರ್ ಕೊನೇ ವಾರದಲ್ಲಿ 'ಪಶ್ಚಿಮ ಘಟ್ಟ ಉಳಿಸಿ' ಜಾಥಾ ಮಾಗುಂಡಿಗೆ ಬರುವ ಸಂದರ್ಭದಲ್ಲಿ ನಡೆಯಲಿರುವ ಈ ಉಪವಾಸ ಸತ್ಯಾಗ್ರಹದ ಕರಾರುವಾಕ್ ದಿನಾಂಕವನ್ನು ಮುಂದೆ ಪ್ರಕಟಿಸಲಾಗುವುದು. ಮಾಗುಂಡಿ ಗ್ರಾಮಸ್ಥರು ಈ ಸತ್ಯಾಗ್ರಹಕ್ಕೆ ಪೂರ್ಣ ಸಹಕಾರ ನೀಡಲು ಕೋರಲಾಗಿದೆ.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಜ್ಯೋತಿ ಅಚ್ಚುಕೂಟ, ಕೊಪ್ಪ